# ಭಾಗ್ಯಲಕ್ಷ್ಮಿ

( ಕಿರು ಕಾದಂಬರಿ )

ಎಂ. ವಿ. ಸೀತಾರಾಮಯ್ಯ, ಎಂ.ಎ.

ಪ್ರಕಾಶಕರು :
**ಎಸ್.ಎಸ್.ಎನ್. ಬುಕ್ ಡಿಪೊ**
ನ್ಯೂ ಮಾರ್ಕೆಟ್ ಬಿಲ್ಡಿಂಗ್ಸ್
ಬೆಂಗಳೂರು

# ಬಿನ್ನಹ

ನನ್ನ ಮಿತ್ರರಾದ ಶ್ರೀಮಾನ್ ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ಈಗ ಕೆಲವು ಕಾಲದ ಹಿಂದೆ ಒಂದು ನಡೆದ ಸಂಗತಿಯನ್ನು ನನಗೆ ಹೇಳಿದರು. ಅದು ಮೂವತ್ತು ನಲವತ್ತು ವರ್ಷಗಳ ಹಿಂದೆ ನಡೆದದ್ದು. ಅದರ ಆಧಾರದ ಮೇಲೆ ಈ ಕಥೆಯನ್ನು ಕಟ್ಟಿರುತ್ತೇನೆ. ಆ ನಡೆದ ಸಂಗತಿ ಎಂದರೆ ಇಷ್ಟೆ: ಒಬ್ಬ ಬಡವನಾದ ತರುಣನು ಮೋಸಹೋಗಿ ಕಪ್ಪು ಹೆಣ್ಣನ್ನು ಮದುವೆಯಾಗುತ್ತಾನೆ; ಬಹಳ ಕಾಲ ಹೆಂಡತಿಯನ್ನು ಕಡೆಗಣಿಸಿರುತ್ತಾನೆ; ಕಡೆಗೆ, ಹೆಂಡತಿಯನ್ನು ಮನೆಗೆ ಕರಸಿಕೊಳ್ಳುತ್ತಾನೆ; ಹೆಂಡತಿ ಮನೆಗೆ ಕಾಲಿಟ್ಟಂದಿನಿಂದ ಅವನು ದಿನೇ ದಿನೇ ಭಾಗ್ಯವಂತನಾಗುತ್ತಾನೆ; ಹೆಂಡತಿಯ ಕಡೆಯ ಆಸ್ತಿಯೂ ತಕ್ಕಮಟ್ಟಿಗೆ ದೊರೆಯುತ್ತದೆ; ಕ್ರಮಕ್ರಮವಾಗಿ ಹೆಂಡತಿಯಲ್ಲಿ ಗಂಡನಿಗೆ ವಿಶ್ವಾಸ ಹುಟ್ಟುತ್ತ ಬರುತ್ತದೆ – ತನ್ನ ಹೆಂಡತಿಯ ದೆಸೆಯಿಂದ ತಾನು ಧನವಂತನಾದೆನೆಂಬ ಭಾವನೆಯ ಕಾರಣದಿಂದ ಇದ್ದರೂ ಇರಬಹುದು!

ಬೇಡವಾಗಿದ್ದ ಕಪ್ಪು ಹೆಂಡತಿಯನ್ನು ತರುಣನು ತನ್ನ ಪ್ರೇಮ ಪತ್ನಿಯಾಗಿ ಸ್ವೀಕರಿಸಿದ ಪ್ರಕರಣ ನನ್ನ ಮನಸ್ಸಿಗೆ ಬಹುವಾಗಿ ಹಿಡಿಯಿತು: ಅದರಲ್ಲಿ – ಸ್ವಾರಸ್ಯದ ಜೊತೆಗೆ – ಒಂದು ಸಮಸ್ಯೆಯ ಸುಳಿವು, ಒಂದು ನೀತಿಯ ಹೊಳವು ಕಂಡುಬಂದುವು. ಅವು ಏನು ಎಂಬುದು ಕಥೆ ಓದಿದರೆ ಗೊತ್ತಾದೀತು. ನಮ್ಮ ನಾಡಿನ ತರುಣ ತರುಣಿಯರು ಈ ಕಥೆಯಿಂದ ಒಂದು ಬೆಳಕು ಕಾಣುವುದಾದರೆ ನನ್ನ ಪ್ರಯತ್ನ ಸಫಲವೆಂದು ಭಾವಿಸುತ್ತೇನೆ.

ಕಥೆಯ ಮುಖ್ಯ ಘಟನೆ ಮಾತ್ರ ನಡೆದ ಸಂಗತಿಯನ್ನು ಸ್ವಲ್ಪಮಟ್ಟಿಗೆ ಅವಲಂಬಿಸಿದೆಯೇ ಹೊರತು, ಇನ್ನುಳಿದ ಘಟನೆ ಸನ್ನಿವೇಶಗಳು, ಪಾತ್ರಗಳು, ಪ್ರಕರಣದ ಹಿನ್ನೆಲೆ - ಮುನ್ನೆಲೆ – ಎಲ್ಲವೂ ಸಂಪೂರ್ಣವಾಗಿ ಕಾಲ್ಪನಿಕ. ಇದರಲ್ಲಿನ ಯಾವ ಪಾತ್ರವೂ ಯಾವ ಜೀವಂತ ವ್ಯಕ್ತಿಯನ್ನೂ ಅನುಕರಿಸಿ ಇಲ್ಲವೆ ಅನುಸರಿಸಿ ಚಿತ್ರಿತವಾಗಿಲ್ಲ.

ಈ ಕಥೆ 'ಸಣ್ಣ ಕಥೆ'ಗಿಂತ ದೊಡ್ಡದಾದ್ದರಿಂದ, ಕಾದಂಬರಿಯ ವಿಸ್ತಾರವನ್ನು ಹೊಂದಿಲ್ಲದಿರುವುದರಿಂದ, ಇದನ್ನು ಕಿರುಕಾದಂಬರಿಯೆಂದು ಕರೆದಿದ್ದೇನೆ. ನೀಳ್ಗತೆಯೆಂದರೂ ಬಾಧಕವಿಲ್ಲ.

ಇದನ್ನು ಪ್ರಕಾಶಪಡಿಸಿರುವ ಉಪಕಾರ ಬೆಂಗಳೂರುನಲ್ಲಿನ ಎಸ್. ಎಸ್. ಎನ್. ಬುಕ್ ಡಿಪೋವಿನ ಒಡೆಯರಾದ ಶ್ರೀ. ಎಂ. ರಾಮರಾಯರದ್ದು ; ಮುದ್ದಾಗಿ ಅಚ್ಚು ಮಾಡಿಕೊಟ್ಟ ನೆರವು ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟದ್ದು ; ಇಬ್ಬರಿಗೂ ನನ್ನ ವಂದನೆಗಳು.

ಬೆಂಗಳೂರು

೨೬-೩-೧೯೪೨

ಎಂ. ವಿ. ಸೀತಾರಾಮಯ್ಯ

ಮುಡಿಪು

ನನ್ನ ಕನ್ನಡದ ವಿದ್ಯಾಗುರುಗಳಾದ

ದಿವಂಗತ

ಟಿ.ಎಸ್. ವೆಂಕಣ್ಣಯ್ಯನವರ

ನೆನಪಿಗೆ

## ಇದೇ ಲೇಖಕರ ಇತರ ಗ್ರಂಥಗಳು

೧. **ಶಿಲಾಮುಖ**

(ಹಾತಾರ್ನಿನ ಮೂರು ಕಥೆಗಳ ಅನುವಾದ) ಬೆಲೆ ೧೨ ಆಣೆ

೨. **ಯೌವನ ಸುಧೆ**

(ಹಾತಾರ್ನಿನ ನಾಲ್ಕು ಕಥೆಗಳ ಅನುವಾದ) .. ೮ ಆಣೆ

೩. **ಹೂವಿನ ಆಸೆ**

(ಸಾಮಾಜಿಕ ನಾಟಕ) .. .. ೧೨ ಆಣೆ

೪. **ಮಾರ್ಗದರ್ಶಕ**

(ಹದಿಮೂರು ಸ್ವತಂತ್ರ ಸಣ್ಣಕಥೆಗಳ ಸಂಗ್ರಹ) .. ೧೪ ಆಣೆ

ಪ್ರಕಾಶಕರು: ಮನೋಹರ ಗ್ರಂಥಮಾಲೆ, ಧಾರವಾಡ

೫. **ತೆರೆಮರೆಯ ಚಿತ್ರಗಳು**

(ಸಾಮಾಜಿಕ ಏಕಾಂಕ ನಾಟಕ) .. ೮ ಆಣೆ

ಪ್ರಕಾಶಕರು: ಕಾವ್ಯಾಲಯ, ಚಾಮರಾಜಪುರಂ, ಮೈಸೂರು

ಮೇಲ್ಕಂಡ ಪುಸ್ತಕಗಳು ದೊರೆಯುವ ಸ್ಥಳ:

೧. ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು

೨. ಎಸ್.ಎಸ್.ಎನ್. ಬುಕ್ ಡಿಪೊ, ಬೆಂಗಳೂರು

# ಭಾಗ್ಯಲಕ್ಷ್ಮಿ

## ೧

### ಹೆಂಗಸಿಗೆ ಗಂಡ ಒಡವೆ ; ಗಂಡಸಿಗೆ ಓದು ಒಡವೆ

"ಅಮ್ಮಾ, ಅಮ್ಮಾ" ಎಂದು ಕೂಗುತ್ತ ನಾರಾಯಣಮೂರ್ತಿ ಒಳಕ್ಕೆ ಬಂದ. ಅವನ ಕೂಗಿನಲ್ಲಿ ಸಂತೋಷ ಉತ್ಸುಕತೆಗಳು ಮಿತಿಮೀರಿ ಇದ್ದುದರಿಂದ ಅವನ ಕೂಗು ಗಾಬರಿಗೊಳಿಸುವಂತಿತ್ತು. ಸಾರಿಗೆ ಒಗ್ಗರಣೆ ಹಾಕುತ್ತಿದ್ದ ಅವನ ತಾಯಿ ವೆಂಕಮ್ಮ ಸೌಟನ್ನು ಕುದಿಯುತ್ತಿದ್ದ ಸಾರಿನೊಳಕ್ಕೆ ಲೊಳಕ್ಕನೆ ಜಾರಿಸಿಬಿಟ್ಟರು ; ಸಾರು ಸ್ವಲ್ಪ ತುಳುಕಿ ಅವರ ಕಾಲಿನ ಮೇಲೆ ಬಿದ್ದು- "ಏನೋ ನಾಣು, ಹೀಗೆ ಗಾಬರಿ ಬೀಳಿಸುವ ಹಾಗೆ ಕೂಗುತ್ತಿ. ನಮ್ಮದೇನು ಅರಮನೆಯೆ ? ಎಷ್ಟು ಮೆಲ್ಲನೆ ಹೇಳಿದರೂ ಅರಚಿಕೊಂಡ ಹಾಗೆ ಕೇಳುತ್ತೆ ಈ ಮುರುಕು ಕೋಣೆಯಲ್ಲಿ" ಎಂದು ಗದರಿಸುವ ದನಿಯಲ್ಲಿ ಹೇಳಿ, ಸಾರು ಬಿದ್ದ ಕಾಲನ್ನು ಒದ್ದೆಯ ಬಟ್ಟೆಯಿಂದ ಒರಸಿಕೊಳ್ಳತೊಡಗಿದರು. ಸೀರೆ ಹರವುತ್ತಿದ್ದ ಅವನ ಅಕ್ಕ ಗೌರಿಯೂ ಗಾಬರಿ ಬಿದ್ದು ಸೀರೆಯನ್ನು ಕೆಳಕ್ಕೆ ಕೆಡವಿಬಿಟ್ಟು, ಅವರಿಬ್ಬರನ್ನೂ ಸುಮ್ಮನೆ ನೋಡುತ್ತ ನಿಂತಿದ್ದಳು. ತಾಯಿಯ ಕೋಪದ ನುಡಿಗಳನ್ನು ಕೇಳಿ ನಾರಾಯಣಮೂರ್ತಿಯ ಮುಖ ಸಪ್ಪೆ ಬಿದ್ದು ಹೋಗಿತ್ತು. ಗೌರಿ ತಮ್ಮನ ಬಳಿಗೆ ಬಂದು, ಅವನನ್ನು ತಬ್ಬಿ ಕರೆದುಕೊಂಡು ಹೋಗಿ, ಒಂದು ಮೂಲೆಯಲ್ಲಿ ಜೋಡಿಸಿಟ್ಟಿದ್ದ ಹಾಸಿಗೆ ಸುರಳಿಯ ಮೇಲೆ ಪಕ್ಕದಲ್ಲಿ ಕೂರಿಸಿಕೊಂಡು, ಅವನ ತಲೆ ನೇವರಿಸುತ್ತ, ಅವನನ್ನು ಸಮಾಧಾನ ಪಡಿಸುತ್ತಿದ್ದಳು. ಗೌರಿ ಸಮಾಧಾನ ಪಡಿಸದೇ ಹೋಗಿದ್ದರೆ ಅವನು ಹಾಗೆಯೇ ದುಃಖವನ್ನು ಮರೆಯುತ್ತಿದ್ದ ಎನ್ನುವ ಹಾಗೆ ಕಾಣುತ್ತದೆ. ಅಕ್ಕನ ಮರುಕದಿಂದ ಅವನ ಅಲ್ಪ ದುಃಖ ಇಮ್ಮಡಿ ಮುಮ್ಮಡಿಯಾಗಿ, ಕಣ್ಣಿನಲ್ಲಿ ನೀರೂ ಬಂದಿತು.

"ಅವನೇನು ಮಗುವೆ, ಅವನನ್ನ ಹೀಗೆ ಸಮಾಧಾನಪಡಿಸುವುದಕ್ಕೆ ? ಲೇ ಗೌರಿ, ನನಗೆ ಹೊತ್ತಾಯಿತು. ಬೇಗ ಬೇಗ ಊಟಕ್ಕೆ ಏಳಿ. ಆಚೆ ಬೀದಿಗೆ ಮೆಣಸಿನಪುಡಿ ಕುಟ್ಟುವುದಕ್ಕೆ ಹೋಗಬೇಕು. ಆಯಿತು, ಸಾರಿಗೆ ಉಪ್ಪೇ ಹಾಕಿಲ್ಲ. ಇದ್ದರಲ್ಲವೆ ಹಾಕುವುದು. ನಾಣು, ನಿನ್ನೆ ನಿನಗೆ ಮೂರು ಕಾಸು ಕೊಟ್ಟಿದ್ದೆನಲ್ಲ, ಎಲ್ಲಿ, ಓಡಿಹೋಗಿ ಉಪ್ಪು ತೆಗೆದುಕೊಂಡು ಬಾ . . . ಯಾಕೋ, ಸುಮ್ಮನೆ ನಿಂತಿದ್ದಿ ಕಲ್ಲುಬೊಂಬೆ ಹಾಗೆ . . . ಗೌರಿ ಗಾದರೂ ಕಾಸು ಕೊಡು, ಅವಳಾದರೂ ಹೋಗಿ ತರಲಿ . . . ಏನು ! ಕಾಸಿಲ್ಲವೆ ? ಏನು ಮಾಡಿದೆ ? ಎಲ್ಲಾದರೂ ಕೆಡವಿಬಿಟ್ಟೆಯೇನೊ ? . . . ಏನೂ ? ಕಡಲೆಪುರಿ ಕೊಂಡುಕೊಂಡೆಯಾ ! ನಾಚಿಗೆಗೇಡೇ ಸರಿ. ಇನ್ನೂ ಎಳೇ ಮಗುವೆ ಕಡಲೆಪುರಿ ತಿನ್ನುವುದಕ್ಕೆ. ಚೆನ್ನಾಗಿದೆ. ಏನೋ ಮಗ ಓದಿ ನನಗೆ ಒಂದಿಷ್ಟು ಹಿಟ್ಟು ಹಾಕುತಾನೆ ಅಂತ ನಾನು ರೆಟ್ಟೆ ಮುರಿಯ ಕೂಲಿ ನಾಲಿ ಮಾಡಿ ಮೂರು ಕಾಸು ಆರು ಕಾಸು ಗಳಿಸಿ ನಿಮ್ಮ ಹೊಟ್ಟೆಗೆ ಹಾಕು ವುದು. ನೀನು ಸಂಪಾದಿಸುವುದು ಹಾಗಿರಲಿ, ಕೊಟ್ಟ ಮೂರು ಕಾಸನ್ನೂ ಕಳೆಯುವುದು. ಬೇಸಗೆ ರಜದಲ್ಲಿ ಭಿಕ್ಷಾನ್ನಕ್ಕೆ ಹೋಗುವುದೂ ಬಿಟ್ಟುಬಿಟ್ಟೆ. ಸರಿ, ಎಷ್ಟು ಹೇಳಿಕೊಂಡರೂ ಗೋಳು ಇದ್ದೇ ಇದೆ. ಕೊರಗಿ ಏನು ಪ್ರಯೋಜನ . . . ಮನೆಯವರನ್ನಾದರೂ ಕೇಳಿ ಒಂದು ಲೋಟ ಉಪ್ಪು ಸಾಲಾನಾದರೂ ತರುತೇನೆ. ಅಷ್ಟುಹೊತ್ತಿಗೆ ತಟ್ಟೆಗಿಟ್ಟೆ ಹಾಕಮ್ಮ ಗೌರಿ."

ವೆಂಕಮ್ಮ ಹಿಂದಿರುಗಿ ಬರುವ ಹೊತ್ತಿಗೆ ಇನ್ನೂ ಇಬ್ಬರೂ ಕಡಲೆಪುರಿ ಯನ್ನು ಬಾಯಿತುಂಬ ತುಂಬಿಕೊಂಡು ತಿನ್ನುತ್ತಲೇ ಇದ್ದರು ; ಹಿಗ್ಗಿಹಿಗ್ಗಿ ನಲಿದಾಡುತ್ತಿದ್ದರು.

"ಏನೇ ಇದು ಗೌರಿ ! ನೀನೂ ಅವನ ಜೊತೆಗೇ ಸೇರಿಕೊಂಡು ಹೀಗೆ ನಲಿಯುತ್ತ ಇದ್ದೀ. ನನ್ನ ಮಾತೂ ಅಂದರೆ ಲಕ್ಷ್ಯವೇ ಇಲ್ಲವೆ ನಿಮಗೆ ?"

ಗೌರಿ ಸಮಾಧಾನದಿಂದ ಉತ್ತರ ಕೊಟ್ಟಳು ; ಆದರೆ ಅವಳ ಮಾತಿ ನಲ್ಲಿ ಸಂತೋಷ ತುಳುಕುತ್ತಿತ್ತು : "ಅಮ್ಮಾ, ನಾಣೂಗೆ ಲವರು ಸಕೆಂಡರಿ ಪರೀಕ್ಷೆ ಪ್ಯಾಸಾಗಿದೆ ಕಣಮ್ಮ !"

"ಏನೂ, ಹಾಗೇ !" ಎಂದು ವೆಂಕಮ್ಮ ಕಣ್ಣರಳಿಸಿ, ಬಾಯಿಬಿಟ್ಟು ಕೊಂಡು ಕೇಳಿದರು.

" ಹೌದು ಕಣಮ್ಮ. ಅದಕ್ಕೇ ಅವನು ' ಅಮ್ಮಾ ' ಅಂತ ಕೂಗಿ ಕೊಂಡು ಬಂದದ್ದು. ನೀನು ಗಾಬರಿಯಾಗಿ ಸುಮ್ಮನೆ ಸಿಕ್ಕಾಬಟ್ಟೆ ಅವನ ಮೇಲೆ ರೇಗಿದೆ, ಅಷ್ಟೆ. "

" ಹೋಗಲಿ. ನಿನಗೋ ? "

" ನನಗೂ ಆಗಿದೆಯಂತೆ ಕಣಮ್ಮ. "

" ಅವಳಿಗೆ ಫಸ್ಟ್ ಕ್ಲಾಸಿನಲ್ಲಿ ಆಗಿದೆ ಕಣಮ್ಮ . . . ಅದಕ್ಕೇ . . . ಇಬ್ಬರಿಗೂ ಪ್ಯಾಸಾಗಿದೆ ಅಂತ . . . ಕಡಲೆಪುರಿ ಕೊಂಡುಕೊಂಡೆ . . . ನೀನು . . . ಸುಮ್ಮನೆ . . . " ಎಂದು ನಾಣು ಗೊಣಗುದನಿಯಲ್ಲಿ ಸೇರಿಸಿದ.

" ನಿಮ್ಮ ಮೇಲೆ ರೇಗದೆ ನಾನು ಯಾರ ಮೇಲೆ ರೇಗಲಿ ? ಅದು ಹೋಗಲಿ. ಅಂತೂ ನೀವಿಬ್ಬರೂ ಪ್ಯಾಸು ಮಾಡಿದಿರಲ್ಲ, ನನಗೆ ಅದೇ ದೊಡ್ಡ ಸಂತೋಷ. ಇನ್ನು ಊಟಕ್ಕೇಳಿ. ಇನ್ನಾದರೂ ತಟ್ಟೆ ಹಾಕಮ್ಮ, ಬಂದೆ " ಎಂದು ವೆಂಕಮ್ಮ ಮತ್ತೆ ಮನೆಯೊಳಕ್ಕೆ (ಎಂದರೆ ತಾವು ಯಾರ ಮನೆಯ ಜಗುಲಿಯ ಮೇಲಿನ ಒಂದು ಕೋಣೆಯಲ್ಲಿ ತಿಂಗಳಿಗೆ ೮ ಆಣೆಯಂತೆ ಬಾಡಿಗೆಗೆ ಇದ್ದರೋ ಅವರ ಮನೆಯ ಒಳಕ್ಕೆ) ಹೋದರು.

ವೆಂಕಮ್ಮ ಹಿಂದಕ್ಕೆ ಬರುವ ಹೊತ್ತಿಗೆ ಮಕ್ಕಳಿಬ್ಬರೂ ತಟ್ಟೆಯ ಮುಂದೆ ಕುಳಿತು ಸಂತೋಷವಾಗಿ ಮಾತಾಡುತ್ತಿದ್ದರು.

ವೆಂಕಮ್ಮ ತಾವು ಸಾಲ ತಂದಿದ್ದ ತುಪ್ಪದಲ್ಲಿ ಕೊಂಚ ತೆಗೆದುಕೊಂಡು ದೇವರ ಮುಂದೆ ದೀಪ ಹೊತ್ತಿಸಿ ಇಟ್ಟು, ದೇವರಿಗೆ ನಮಸ್ಕಾರ ಮಾಡಿದರು. ತಾಯಿ ಹೇಳಿದಂತೆ ಮಕ್ಕಳೂ ದೇವರಿಗೆ ನಮಸ್ಕಾರ ಮಾಡಿದರು. ವೆಂಕಮ್ಮ ಕೊಂಚ ಹೊತ್ತು ಹಾಗೆಯೇ ಮೌನದಿಂದ ದೇವರನ್ನು ಪ್ರಾರ್ಥಿಸುತ್ತಿದ್ದರು. ಮಕ್ಕಳೂ ದೇವರಿಗೆ ನಮಸ್ಕಾರ ಮಾಡಿದರು. ಗೌರಿ ಕಣ್ಣುಮುಚ್ಚಿ ಮೌನ ವಾಗಿದ್ದಳು. ನಾರಾಯಣಮೂರ್ತಿ ತನ್ನ ತಂದೆಯ ತೊಡೆಯ ಮೇಲೆ ಕುಳಿತು ಕಲಿತಿದ್ದ ಸ್ತೋತ್ರಗಳಲ್ಲಿ ಒಂದೆರಡನ್ನು ಹೇಳಿದ.

" ಅವರು ನಿನಗೆ ಇನ್ನೇನೂ ಆಸ್ತಿ ಬಿಡಲಿಲ್ಲವಪ್ಪ. ಈ ಸ್ತೋತ್ರಗಳನ್ನು ಬಿಟ್ಟು ಹೋಗಿದಾರೆ. ಅವುಗಳಿಂದ ನಿನಗೆ ಒಳ್ಳೆಯದಾಗಬೇಕಪ್ಪ " ಎಂದು ವೆಂಕಮ್ಮ ಮಗನ ಕಡೆ ತಿರುಗಿ ಹೇಳಿದರು. ಅವರ ಕಣ್ಣಿನಲ್ಲಿ ನೀರು ಪೊರೆಗಟ್ಟಿ ದ್ದುದು ಮಕ್ಕಳಿಗೆ ಕಾಣಬರಲಿಲ್ಲ.

ಮಕ್ಕಳು ಊಟಕ್ಕೆ ಕುಳಿತುಕೊಂಡರು. ವೆಂಕಮ್ಮ ಬಡಿಸತೊಡಗಿದರು.

ನಾಣಿ ಮೆಲ್ಲನೆ ಕೇಳಿದ: "ನೀನು ಏನು ಕೊಡು ಅಂತ ದೇವರನ್ನ ಕೇಳಿಕೊಂಡೆ ಗೌರಿ?"

"ನನ್ನ ತಮ್ಮನಿಗೆ ವಿದ್ಯಾಬುದ್ಧಿ ಕೊಡಪ್ಪ, ಬೇಕಾದಷ್ಟು ಐಶ್ವರ್ಯ ಕೊಡಪ್ಪ, ಒಳ್ಳೆ ಚೆಲುವೆಯಾದ ಹೆಂಡತಿ ಕೊಡಪ್ಪ ಅಂತ ಕೇಳಿಕೊಂಡೆ."

"ನಿನಗೇನೂ ಬೇಡವೇನೆ ಗೌರಿ?" ವೆಂಕಮ್ಮ ಕೇಳಿದರು.

"ನನಗೇನು ಬೇಕಾಗಿದೆ ಅಮ್ಮ. ಅವನಿಗೆ ಭಾಗ್ಯ ಬಂದರೆ ನನಗೆ ಬಂದ ಹಾಗೆ ಅಲ್ಲವೆ?"

"ಹೌದಮ್ಮ ಹೌದು. ನಿನ್ನ ದೊಡ್ಡ ಭಾಗ್ಯ ನೀನು ಕಳೆದುಕೊಂಡು ಈ ಸಣ್ಣವಯಸ್ಸಿಗೇ ನನ್ನ ಹಾಗೆ ಆದೆ" ಎಂದು ಜಗುಳಿದ ಕಂಬನಿಗಳನ್ನು ಸೆರಗಿನ ಕೊನೆಯಿಂದ ಒರಸಿಕೊಂಡು, ತುಪ್ಪ ಬಡಿಸಿದರು.

"ಇದೇನಮ್ಮ! ತುಪ್ಪ!" ಎಂದು ನಾರಾಯಣಮೂರ್ತಿ ಸಂತೋಷ ದಿಂದ ಕೇಳಿದ.

"ನಾನು ನಿಮಗೆ ಏನು ಹಾಕಬಲ್ಲೆ? ತುಪ್ಪದ ಸೊಲ್ಲೇ ನೀವು ಕೇಳಿ ಕಾಣಿರಿ. ಇವೊತ್ತು ಮನೆಯವರಿಂದ ಸಾಲ ತಂದೆ–ನೀವು ಪ್ಯಾಸುಮಾಡಿದ್ದೀರಿ, ದೇವರಿಗೆ ತುಪ್ಪದ ದೀಪ ಹೊತ್ತಿಸಿ, ನಿಮಗೂ ಒಂದು ಮಿಳ್ಳೆ ಹಾಕೋಣ ಅಂತ. ಆ ಭಾಗ್ಯಲಕ್ಷ್ಮಿಯ ಸೆರಗಿನ ಗಾಳಿಯಾದರೂ ಎಂದು ನಮ್ಮ ಮನೆಯೊಳಕ್ಕೆ ಬೀಸುತ್ತದೋ ನಾನು ಕಾಣೆ" ಎಂದು ವೆಂಕಮ್ಮ ಕೊರಗಿ ನುಡಿದರು.

ಸ್ವಲ್ಪ ಹೊತ್ತು ಮಕ್ಕಳ ಊಟ ಮೌನದಿಂದ ಸಾಗಿತು.

ಗೌರಿ ಮಾತೆತ್ತಿದಳು: "ಅಮ್ಮಾ, ನಾಣೂನ ಮುಂದಕ್ಕೆ ಓದಿಸ ಬೇಕಮ್ಮಾ. ನಾಣಿ, ನಿನಗೆ ಮುಂದಕ್ಕೆ ಓದುವುದಕ್ಕೆ ಆಸೆ ಇಲ್ಲವೆ?"

"ಆಸೆ ಇಲ್ಲದೆ ಏನು? ನೀನೆ ಓದಬಹುದಂತೆ ನಾನು ಓದಕೂಡದೊ? ಬೀದಿಯವರೆಲ್ಲ ಆಡಿಕೊಳ್ಳುತಾರೆ ನೀನು ಮಿಷನ್ ಇಸ್ಕೂಲಿಗೆ ಹೋಗಿ ಜಾತಿಕೆಟ್ಟು ಹೋಗುತೀಯೆ ಅಂತ. ಹಾಗಾದರೂ ನೀನು ಓದಿ ಪ್ಯಾಸು ಮಾಡೇಬಿಟ್ಟೆ. ನಾನು ಮಾತ್ರ ಓದಕೂಡದೊ? ನಾನು ಓದೇ ಓದುತೀನಿ."

"ಅವನಿಗೆ ಇಷ್ಟು ಆಸೆ ಇರುವಾಗ ಅವನನ್ನು ಖಂಡಿತ ಓದಿಸಬೇಕಮ್ಮ. ನನಗೆ ಇಷ್ಟೇ ಸಾಕು. ಇಷ್ಟು ಓದಿದ್ದಕ್ಕೇ ಎಲ್ಲರೂ ಹಾಸ್ಯ ಮಾಡುತ ಇದಾರೆ,

ಅದೂ ಅಲ್ಲದೆ, ನಾನು ಮುಂದಕ್ಕೆ ಓದಿದರೆ ಓದುವ ಖರ್ಚು ಬೇರೆ ಹೆಚ್ಚು. ನೀನು ದುಡಿದು ಇಬ್ಬರನ್ನೂ ಓದಿಸುವುದಕ್ಕೆ ಆಗುವುದಿಲ್ಲ ಕಣಮ್ಮ. ”

“ ಹೌದಮ್ಮಾ ಹೌದು. ಎಲ್ಲ ನೇರವಾಗಿದ್ದರೆ ನೀನು ಯಾಕೆ ಓದ ಬೇಕಾಗಿತ್ತಮ್ಮ. ನಾಣು ಓದಬೇಕಾದ್ದು ನ್ಯಾಯ. ಹೆಂಗಸಿಗೆ ಗಂಡ ಒಡವೆ; ಗಂಡಸಿಗೆ ಓದು ಒಡವೆ. ಆದರೆ ನಿನ್ನ . . . ಏನೋ ನೀನೂ ಸ್ವಲ್ಪ ಓದಿದರೆ ಒಳ್ಳೆಯದು ಅಂತ ಯಾರು ಯಾರೋ ಹೇಳಿದರಮ್ಮ. ಇನ್ನು ಮೇಲೆ ಹೆಣ್ಣು ಮಕ್ಕಳಿಗೆ ಬೇರೆಬೇರೆ ಇಸ್ಕೂಲು ಬೇಕಾದಷ್ಟು ಇಡುತಾರಂತೆ. ಹೆಂಗಸು ಮೇಷ್ಟರು ಬೇಕಂತೆ. ಏನೋ ನೋಡೋಣ, ನಿನ್ನ ಹಣೆಯಲ್ಲಿ ಇನ್ನೂ ಏನೇನು ಬರೆದಿದೆಯೊ. ”

ನಾಣು ಹೇಳಿದ: “ ನೀನೂ ಓದಬೇಕು ಗೌರಿ. ನೀನು ಓದದೆ ಹೋದರೆ ನಾನು ಓದುವುದಿಲ್ಲ. ನೀನು ಓದದೆ ನಾನು ಮುಂದಿನ ಕ್ಲಾಸಿಗೆ ಹೊರಟುಹೋದರೆ ನನಗೆ ಮನೆಯಲ್ಲಿ ಪಾಠ ಹೇಳಿಕೊಡುವವರು ಯಾರು ? ನೀನು ಹೇಳಿಕೊಟ್ಟದ್ದರಿಂದ ನನಗೆ ಪ್ಯಾಸಾಯಿತು. ಅಮ್ಮ ತರುವ ದುಡ್ಡಿನಲ್ಲಿ ಪುಸ್ತಕಗಿಸ್ತಕ ತೆಗೆದುಕೊಳ್ಳೋಣ. ನಾನು ಮೊದಲಿಗಿಂತ ಹೆಚ್ಚು ಮನೆಗಳಿಗೆ ಭಿಕ್ಷಾನ್ನಕ್ಕೆ ಹೋಗುತೇನೆ. ನಮ್ಮಿಬ್ಬರಿಗೂ ಊಟಕ್ಕೆ ಆಗುತ್ತೆ. ಅಮ್ಮ ನಮ್ಮ ಯೋಚನೆ ಮಾಡಬೇಕಾದ್ದೆ ಇಲ್ಲ. ಅಷ್ಟೂ ದುಡ್ಡು ಸಾಲದೆ ಹೋದರೆ ನಾನು ಎಲ್ಲಾದರೂ ಒಂದೆರಡು ಪಾಠ ಗೊತ್ತುಮಾಡಿಕೊಳ್ಳುತೇನೆ. ನಮ್ಮ ಖರ್ಚಿಗೆ ಆಗುತ್ತೆ. ನಮಗಾಗಿ ಅಮ್ಮ ಹೆಚ್ಚು ಕಷ್ಟಪಡಬೇಕಾಗಿಲ್ಲ. ನೀನು ಖಂಡಿತ ಓದಬೇಕು ಗೌರಿ. ಮಹಾರಾಣಿ ಕಾಲೇಜಿಗೆ ಸೇರಿಕೊಂಡುಬಿಡು.”

“ ನಾಣು ಎಷ್ಟು ಒಳ್ಳೆಯವನಾಗಿಬಿಟ್ಟಿದಾನೆ ಈಗ! ಹಾಗೆ ಮಾಡು ಗೌರಿ. ನಿನಗೆ ‘ಮೆಟ್ರಿಕ್ಲೇಶನ್’ ಪರೀಕ್ಷೆಯಾದರೂ ಮಾಡಿಸಬೇಕು ಅಂತ ಸಾವಿತ್ರಮ್ಮನವರು ಹೇಳುತ್ತಲೇ ಇದ್ದಾರೆ. ಅಷ್ಟಾದರೂ ಮಾಡಬೇಕಂತೆ ಮೇಡಂ ಕೆಲಸ ಸಿಕ್ಕುವುದಕ್ಕೆ. ನಾಣು ಹೇಳಿದಹಾಗೆ ಮಹಾರಾಣಿ ಕಾಲೇಜಿಗೆ ಸೇರಿಕೊಂಡು ಬಿಡು. ನಿನಗೇನು ತೊಂದರೆ?” ಎಂದರು ವೆಂಕಮ್ಮ.

ಅದಕ್ಕೆ ಗೌರಿ: “ ಅಮ್ಮ , ನನ್ನದು ಹಾಗಿರಲಮ್ಮ. ಇಷ್ಟು ಓದಿಗೇ ಕೆಲಸ ಸಿಕ್ಕುತ್ತೆ ಅಂತ ಎಲ್ಲರೂ ಹೇಳುತಾರೆ. ಅಲ್ಲದೆ ನಾಣು ಭಿಕ್ಷಾನ್ನಕ್ಕೂ ಮನೆಮನೆ ಸುತ್ತುತ್ತ, ಪಾಠವನ್ನೂ ಹೇಳಿಕೊಂಡು ಓದುವುದು ಅಂದರೆ

ಸಾಧ್ಯವಿಲ್ಲ ಅಮ್ಮಾ. ಅಲ್ಲದೆ ಅವನು ಇನ್ನೂ ಹೆಚ್ಚು ಬುದ್ಧಿವಂತನಾಗಬೇಕು. ಮೆಟ್ರಿಕ್ಯುಲೇಶನ್ ಫಸ್ಟ್ ಕ್ಲಾಸಿನಲ್ಲಿ ಮಾಡಬೇಕು. ಇಷ್ಟಾಗಬೇಕಾದರೆ ಅವನಿಗೆ ಬಿಡುವು ಬೇಡವೆ, ಮನಸ್ಸಿಗೆ ನೆಮ್ಮದಿ ಬೇಡವೆ? ಈಗಲೇ ಪ್ರಯತ್ನ ಪಟ್ಟು ನೋಡಿದರೆ ನನಗೂ ಎಲ್ಲಾದರೂ ಕೆಲಸ ಸಿಕ್ಕಬಹುದು. ಸಾಧ್ಯವಾದರೆ ಅವನು ಭಿಕ್ಷಾನ್ನ ಎತ್ತುವುದನ್ನೂ ತಪ್ಪಿಸಬೇಕು" – ಎಂದಳು.

ಮಕ್ಕಳ ಮಾತುಗಳನ್ನು ಕೇಳಿ ವೆಂಕಮ್ಮನವರಿಗೆ ಅಪಾರ ಆನಂದ ವಾಯಿತು. 'ದೇವರು ಚಿನ್ನದಂಥ ಮಕ್ಕಳು ಕೊಟ್ಟ, ಭಾಗ್ಯ ಮಾತ್ರ ಕೊಡಲಿಲ್ಲ' ಎಂದು ಮನಸ್ಸಿನಲ್ಲೇ ಕೊರಗಿದರು.

## ೨

## ಹತ್ತು ಮಕ್ಕಳ ಜೊತೆ ನೀನೂ ಒಬ್ಬ

ನಾರಾಯಣಮೂರ್ತಿ ಹೈಸ್ಕೂಲಿಗೆ ಸೇರಿದ. ವೆಂಕಮ್ಮ ಹಲವು ಮಂದಿ 'ದೊಡ್ಡ ಮನುಷ್ಯ'ರ ಮನೆಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದುದರಿಂದ ಕೆಲವರ ಶಿಫಾರಸು ಪಡೆಯುವುದು ಅಷ್ಟೇನೂ ಕಷ್ಟವಾಗಲಿಲ್ಲ. ಅಲ್ಲದೆ, ನಾರಾಯಣ ಮೂರ್ತಿ ದಟ್ಟದರಿದ್ರ ವಿದ್ಯಾರ್ಥಿ ಎನ್ನುವುದಕ್ಕೆ ಯಾವ ಶಿಫಾರಸೂ ಬೇಕಾಗಿ ಇರಲಿಲ್ಲ. ಸುಲಭವಾಗಿಯೇ ನಾರಾಯಣಮೂರ್ತಿಗೆ 'ಫ್ರೀಷಿಪ್' ದೊರೆಯಿತು.

ಗೌರಿಗೆ 'ಮೇಡಂ' ಕೆಲಸವೂ ದೊರೆಯಿತು; ಆದರೆ ಮೈಸೂರಿನಲ್ಲಿ ಅಲ್ಲ, ಹಾಸನದಲ್ಲಿ. ಹದಿನೇಳು ಹದಿನೆಂಟು ವರ್ಷದ ಹುಡುಗಿಯನ್ನು ಒಬ್ಬಳನ್ನೆ ದೂರಸ್ಥಳಕ್ಕೆ ಕಳಿಸಲು ವೆಂಕಮ್ಮ ಒಪ್ಪಲಿಲ್ಲ. ನೆರೆಹೊರೆಯವರೂ ಬೇಡವೆಂದರು. ನಾರಾಯಣಮೂರ್ತಿಯೇನೋ, ತಾನು ಭಿಕ್ಷಾನ್ನ ಮಾಡಿ ಕೊಂಡು ಒಬ್ಬನೇ ಕೋಣೆಯಲ್ಲಿ ಇರುವುದಾಗಿಯೂ ಅಮ್ಮ ಅಕ್ಕನೊಡನೆ ಜೊತೆಗೆ ಹೋಗಬಹುದೆಂದೂ, ತನಗೆ ತಿಂಗಳಿಗೆ ಎರಡೊ ಮೂರೊ ರೂಪಾಯಿ ಗಳನ್ನು ಸಾಧ್ಯವಾದರೆ ಕಳಿಸುತ್ತಿರಬಹುದೆಂದೂ ಹೇಳಿದ. ಏನಾದರೂ ವೆಂಕಮ್ಮ ತನ್ನ ಮಗಳು ಒಬ್ಬಳನ್ನೆ ಕಳಿಸಲು ಒಪ್ಪಲಿಲ್ಲ. ಇದರಿಂದ ಗೌರಿ ಮೈಸೂರಿನಲ್ಲಿಯೆ ಉಳಿಯಬೇಕಾಯಿತು.

ನಾರಾಯಣಮೂರ್ತಿ ಈಗ ಹೈಸ್ಕೂಲಿನಲ್ಲಿ ಓದುತ್ತಿದ್ದುದರಿಂದ ಓದು ಎಂದಿಗಿಂತ ಹೆಚ್ಚಾಗಿತ್ತು. ಒಂದೊಂದು ದಿನ ಭಿಕ್ಷಾನ್ನಮಾಡಿಕೊಂಡು ಬರುವುದು ಹೊತ್ತಾಗಿ ಶಾಲೆಗೂ ತಡವಾಗುತ್ತಿತ್ತು. ಉಪಾಧ್ಯಾಯರು ಒಂದೆರಡು ಸಲ ಸುಮ್ಮನಿದ್ದರು. ಇನ್ನು ಮುಂದೆ ತಡವಾಗಿ ಬಂದರೆ ತರಗತಿಗೆ ಸೇರಿಸುವುದಿಲ್ಲವಾಗಿ ಬೆದರಿಸಿದರು. ಅವರೊಬ್ಬ ನಿಷ್ಕರುಣಿ ಉಪಾಧ್ಯಾಯರಾಗಿದ್ದರು. ನಾರಾಯಣಮೂರ್ತಿ ಏಕೆ ತಡವಾಗಿ ಬರುತ್ತಿದ್ದನೆಂಬುದು ಗೊತ್ತಾದ ಮೇಲೂ ಸುಮ್ಮನಾಗಲಿಲ್ಲ. ಒಂದು ದಿನ ತುಂಬ ರೇಗಿಬಿಟ್ಟು, " ಭಿಕ್ಷಾನ್ನವಲ್ಲದಿದ್ದರೆ ವಾರಾನ್ನ ಮಾಡಿಕೊ ; ಹೊಸದಾಗಿ ಒಂದು 'ಅನಾಥಾಲಯ' ಸ್ಥಾಪಿತವಾಗಿದೆ, ಅಲ್ಲಿಗೆ ಸೇರಿಕೊ. ಅಂತೂ ಸ್ಕೂಲಿಗೆ ತಡವಾಗಿ ಮಾತ್ರ ಬರಕೂಡದು " ಎಂದುಬಿಟ್ಟರು.

ಆ ದಿನ ಮನೆಗೆ ಬಂದಮೇಲೆ ಉಪಾಧ್ಯಾಯರು ಗದರಿಕೊಂಡದ್ದನ್ನು ತಾಯಿಗೆ ತಿಳಿಸಿದ. ತಾಯಿ ಹೀಗೆಂದರು :

" ಒಳ್ಳೆಯದಾಯಿತು. ಅವರು ಹೇಳಿದ ಹಾಗೆ ವಾರಾನ್ನಾನೇ ಮಾಡಿಕೊ. ಸದ್ಯಕ್ಕೆ ಮನೆಯವರೇ ಒಂದು ವಾರ ಕೊಟ್ಟೇ ಕೊಡುತಾರೆ. ಗದರಿಕೊಂಡರಲ್ಲ, ಆ ನಿಮ್ಮ ಮೇಷ್ಟರನ್ನೆ ಕೇಳು, ನಿಮ್ಮ ಮನೆಯಲ್ಲಿ ಒಂದು ವಾರ ಕೊಡಿ ಅಂತ. ಉಳಿದ ವಾರಗಳನ್ನು ಗೊತ್ತುಮಾಡಿಕೊಳ್ಳೋಣ. ವಾರ ಸಿಕ್ಕದೆ ಹೋದ ದಿನ ಭಿಕ್ಷಾನ್ನವೇ ಮಾಡಬೇಕಪ್ಪ."

ನಾರಾಯಣಮೂರ್ತಿ ಸುಮ್ಮನಿದ್ದ. ರಾತ್ರಿ ಮಲಗಿಕೊಂಡಾಗ ಅವನಿಗೆ ಚೆನ್ನಾಗಿ ನಿದ್ದೆಯೇ ಬರಲಿಲ್ಲ. ಅವನು ದಿಂಬಿಗೆ ತಲೆ ಕೊಡುವುದೇ ತಡ, ನಿತ್ಯ ಅವನಿಗೆ ನಿದ್ದೆ ಬಂದುಬಿಡುತ್ತಿತ್ತು. ನಿದ್ದೆ ಹತ್ತುವ ಮುನ್ನ ಯೋಚನೆಗೆ ಇಟ್ಟುಕೊಂಡದ್ದು ಇದೇ ಮೊದಲು. ಆದರೂ ಅವನದು ಇನ್ನೂ ತೀರ ಹುಡುಗಮನಸ್ಸಾದ್ದರಿಂದ ಅವನ ಯೋಚನೆ ಗೆರೆಬರೆಯ ಚಿತ್ರದಂತೆ ಬರಿಯ ಗೊಂದಲವಾಗಿತ್ತು. ವಿಚಾರಮಾಡುವ ಶಕ್ತಿ ಅವನ ಬಗೆಗೆ ಇನ್ನೂ ಬಂದಿರಲಿಲ್ಲ. ಆಲೋಚನಾಲಹರಿ ಅವನನ್ನು ಯಾವ ನಿರ್ಧಾರಕ್ಕೂ ಒಯ್ಯದೆ, ನೇರವಾಗಿ ನಿದ್ರಾಸಾಗರಕ್ಕೆ ತೆಗೆದುಕೊಂಡುಹೋಗಿ ಮುಳುಗಿಸಿತು. ನಿದ್ದೆಗೆ ಮುನ್ನ ಅವನು ಬಗೆಗೆ ಅಷ್ಟು ಕೆಲಸ ಕೊಟ್ಟದ್ದರ ಪರಿಣಾಮವಾಗಿ, ಏಳುವ ಮುನ್ನ ಕನಸಿಗೆ ಮೊದಲಾಗಿತ್ತು. ಕನಸಿನಲ್ಲಿ ಅವನಿಗೆ ಭಾಗ್ಯಲಕ್ಷ್ಮಿ

ಒಲಿದಿದ್ದಳು ; ಅವನು ಭಾಗ್ಯವಂತನಾಗಿದ್ದ. ಭಾಗ್ಯವಂತರಿಗೆ ಭಾಗ್ಯಪ್ರಾಪ್ತಿಯ ಕನಸಾದರೂ ಏಕೆ ಆಗಬೇಕು ! ಕನಸಿನ ಭಾಗ್ಯದ ಸವಿ ಉಣ್ಣುವ ಪುಣ್ಯ ಬಡವರ ಪಾಲಿಗೇ ಮೀಸಲು. ಅಂತೆಯೆ ಅವನು ಕನಸಿನಲ್ಲಿ ಪರಿಪರಿಯ ಭೋಗಗಳನ್ನು ಅನುಭವಿಸಿ ತಣಿದ. ಆದರೆ, ದುರ್ದೈವ–ಕನಸಿನಲ್ಲೂ ಲಕ್ಷ್ಮಿ ಚಂಚಲೆಯೇ ಆಗಿರಬೇಕೆ ! ಕನಸು ಕೊನೆಮುಟ್ಟುವ ಹೊತ್ತಿಗೆ ಅವನು ಅನಾಥಾಲಯದ ಬಾಲಕನಾಗಿದ್ದ. ಆ ಕೂಡಲೆ ಅವನಿಗೆ ಎಚ್ಚರವಾಯಿತು. ಅಷ್ಟುಹೊತ್ತಿಗೆ ಬೆಳಕೂ ಹರಿಯುತ್ತಿತ್ತು. ಕನಸಿನ ಭೋಗವೆಲ್ಲ ಅವನ ನೆನಪಿನಿಂದ ಜಾರಿ, ಅನಾಥಾಲಯದ ಬಾಲಕನಾಗಿದ್ದ ಅಂಶ ಮಾತ್ರ ನೆನಪಿನಲ್ಲಿ ಉಳಿದಿತ್ತು.

ಬೆಳಗಾಗ ಎದ್ದಕೂಡಲೆ ನಾರಾಯಣಮೂರ್ತಿ ತಾಯಿಯನ್ನು ಪ್ರಶ್ನಿಸಿದ: "ಅಮ್ಮಾ, ನಾನು ಅನಾಥಾಲಯಕ್ಕೆ ಏಕೆ ಸೇರಿಕೊಳ್ಳಬಾರದು ?"

"ಅನಾಥಾಲಯ ಯಾವುದು ಮಗು ?"

"ಯಾವುದೋ ಹೊಸದಾಗಿ ಆಗಿದೆಯಂತೆ ಕಣಮ್ಮ. ಅಲ್ಲಿ ಬಡಹುಡುಗರಿಗೆ ಅನ್ನಹಾಕಿಸಿ ಓದಿಸುತ್ತಾರಂತೆ. ನಮ್ಮ ಮೇಷ್ಟರು ನನ್ನನ್ನ ಗದರಿಕೊಂಡರು ಅಂತ ನಿನ್ನೆ ಹೇಳಲಿಲ್ಲವೆ, ಗದರಿಕೊಂಡಾಗ ಅದರ ವಿಚಾರ ಎತ್ತಿದರು."

"ಅವರನ್ನೇ ವಿಚಾರಿಸಿ ಪ್ರಯತ್ನಪಟ್ಟು ನೋಡಪ್ಪ."

ನಾರಾಯಣಮೂರ್ತಿ ಅನಾಥಾಲಯದ ವಿಚಾರವಾಗಿ ಉಪಾಧ್ಯಾಯರನ್ನು ವಿಚಾರಿಸಿದ. ಅವರು ಎಲ್ಲವನ್ನೂ ತಿಳಿಯಹೇಳಿ, ತಾವೇ ಅವನನ್ನು ಆ ಸಂಸ್ಥೆಯ ಸ್ಥಾಪಕರ ಬಳಿ ಕರೆದೊಯ್ದರು. ನಾರಾಯಣಮೂರ್ತಿಯನ್ನು ಅನಾಥಾಲಯಕ್ಕೆ ಸೇರಿಸಿಕೊಳ್ಳಲು ಅವರು ಯಾವ ಆಕ್ಷೇಪಣೆಯನ್ನೂ ತರಲಿಲ್ಲ. ಸ್ಥಾಪಕರು ದಯಾಮೂರ್ತಿಗಳು, ಉದಾರಿಗಳು. ಆದರೆ ಸಂಸ್ಥೆ ಇನ್ನೂ ಹೊಸದಾದ್ದರಿಂದ ಅದಕ್ಕೆ ಹೆಚ್ಚಿನ ಧನಬಲವಿರಲಿಲ್ಲ. ಆಗಲೇ ಎಷ್ಟು ಮಂದಿ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಬಹುದೊ ಅದಕ್ಕಿಂತ ಹೆಚ್ಚಾಗಿ ಒಬ್ಬಿಬ್ಬರನ್ನು ಸೇರಿಸಿಕೊಂಡು ಬಿಟ್ಟಿದ್ದರು. ಕಾಲ ಮೀರಿ ಹೋಗಿದೆಯೆಂದೂ ಸದ್ಯಕ್ಕೆ ಅವಕಾಶವಿಲ್ಲವೆಂದೂ ಮುಂದಿನ ವರ್ಷ ಆಗಬಹುದೆಂದೂ ಅವರು ನಾರಾಯಣಮೂರ್ತಿಗೆ ಉತ್ತರ ಕೊಟ್ಟರು. ನಾರಾಯಣಮೂರ್ತಿ ನಿರಾಶೆಯಿಂದ ಹಿಂದಿರುಗಬೇಕಾಯಿತು.

"ಮಗೂ, ಇದುವರೆಗೂ ಭಿಕ್ಷಾನ್ನ ಮಾಡಿಕೊಂಡು ಕಾಲಕ್ಷೇಪಮಾಡಿದೆ. ವಾರಾನ್ನ ತಿನ್ನುವುದು ಇನ್ನೂ ಎಷ್ಟುದಿನ ನಿನ್ನ ಹಣೆಯಲ್ಲಿ ಬರೆದಿದೆಯೋ ಯಾರು ಕಂಡಿದ್ದಾರೆ? ಈಗ ನಿನಗೆ ಏಳು ವಾರವೂ ಸಿಕ್ಕಿದ ಹಾಗಾಗಿದೆ. ಸುಮ್ಮನೆ ಯಾಕೆ ವ್ಯಥೆಪಡುತ್ತೀಯ? ಸ್ಥಳ ಸಿಕ್ಕಿದ್ದರೇನೋ ಚೆನ್ನಾಗಿತ್ತು. ಆರೇಳು ಜನದ ಹಂಗು ತಪ್ಪಿ ಒಂದು ಕಡೆ ನೆಮ್ಮದಿಯಾಗಿ ಇರಬಹುದಾಗಿತ್ತು" ಎಂದು ವೆಂಕಮ್ಮ ಮಗನನ್ನು ಸಮಾಧಾನಪಡಿಸಿದರು.

ಆ ವರ್ಷವೆಲ್ಲ ನಾರಾಯಣಮೂರ್ತಿ ವಾರಾನ್ನದಲ್ಲೆ ಕಾಲ ತಳ್ಳಿದ. ವಾರಕ್ಕೆ ಹೋಗುವ ಮನೆಗಳಲ್ಲೆಲ್ಲ ನಾರಾಯಣಮೂರ್ತಿಯನ್ನು ಬಹಳ ವಿಶ್ವಾಸದಿಂದ ಕಂಡುಕೊಳ್ಳುತ್ತಿದ್ದರು. ಯಾರ ಮನೆಗೂ ಅವನು ತಡವಾಗಿ ಹೋಗುತ್ತಿರಲಿಲ್ಲ. ಒಂದು ಅರ್ಧಗಂಟೆ ಮುಂಚೆ ಹೋಗಿ ಕಾದು ಕುಳಿತಿರುತ್ತಿದ್ದ. ಯಾರ ಮನೆಯಲ್ಲಾದರೂ ಅಕಸ್ಮಾತ್ ಅಡಿಗೆ ತಡವಾಗಿ, ತನಗೆ ಶಾಲೆಗೆ ಹೊತ್ತಾಗುವುದೆಂಬ ಸೂಚನೆ ಕಂಡುಬಂದರೆ, ಶಾಲೆಗೆ ತಡವಾದರೆ ಉಪಾಧ್ಯಾಯರು ಆಕ್ಷೇಪಿಸುತ್ತಾರೆಂದೂ ತೊಂದರೆ ಆಗದೆ ಹೋದರೆ ಮಧ್ಯಾಹ್ನದ ಮೇಲೆ ಬಿಡುವು ಹೊತ್ತಿನಲ್ಲಿ ಬಂದು ಊಟ ಮಾಡಿಕೊಂಡು ಹೋಗುವುದಾಗಿಯೂ ಮನೆಯವರಿಗೆ ತಿಳಿಸುತ್ತಿದ್ದ. ವೆಂಕಮ್ಮ ಜನಕೆಲ್ಲ ಬೇಕಾದವರು; ಅವರ ಮಗ ಇವನು. ಅಲ್ಲದೆ ಹುಡುಗ ನೋಡುವುದಕ್ಕೆ ಲಕ್ಷಣವಾಗಿದ್ದ; ಸುಟಿಯಾಗಿದ್ದ; ವಿದ್ಯೆಯಲ್ಲಿ ಅಪಾರ ಆಸಕ್ತಿ ತೋರಿಸುತ್ತಿದ್ದ. ಆದ್ದರಿಂದ ಯಾರೂ ಇವನಲ್ಲಿ ಎಳ್ಳಷ್ಟೂ ಅಸಮಾಧಾನಪಟ್ಟುಕೊಳ್ಳದೆ,– "ನಿನಗೆ ಯಾವಾಗ ಅನುಕೂಲವಾದರೆ ಆವಾಗ ಬಾ, ಮಗು. ಹತ್ತು ಮಕ್ಕಳ ಜೊತೆ ನೀನೂ ಒಬ್ಬ. ಏನಾದರೂ ಯಾರ ಮನೆಯಲ್ಲಾದರೂ ವಾರ ತಪ್ಪಿ ಹೋದರೆ ಆ ವಾರದ ದಿನವೂ ನಮ್ಮ ಮನೆಗೇ ಬಂದುಬಿಡಪ್ಪ" ಎಂದು ಹೇಳುತ್ತಿದ್ದರು.

ಈ ಮರುಕದ ಮಾತುಗಳಿಂದ ನಾರಾಯಣಮೂರ್ತಿಗೆ ಸಂತೋಷವಾಗುತ್ತಿದ್ದರೂ, ಹೃದಯದ ಯಾವುದೋ ಮೂಲೆಯಲ್ಲಿ ಒಂದು ಕುಟುಕುವೇದನೆಯಾಗುತ್ತಿತ್ತು : "ಅಯ್ಯೋ ದೇವರೆ, ಎಷ್ಟು ದಿನ ಈ ಹಂಗಿನ ಬಾಳು ಬದುಕಬೇಕಪ್ಪ. ಇಷ್ಟೊಂದು ಜನರ ಹಂಗನ್ನು ನಾನು ಹೇಗೆ ತೀರಿಸಲಿ?" ಎಂದೆನ್ನಿಸುತ್ತಿತ್ತು.

ಎರಡು ವಾರದ ಮನೆಗಳಲ್ಲಿ ನಾರಾಯಣಮೂರ್ತಿಯಿಂದಲೇ ಮನೆಯ ಮಕ್ಕಳಿಗೆ ಪಾಠ ಹೇಳಿಸುತ್ತಿದ್ದರು. ಇದರಿಂದ ಅವನಿಗೆ ತಿಂಗಳಿಗೆ ನಾಲ್ಕು ರೂಪಾಯಿ ಸಂಪಾದನೆಯಾಗುತ್ತಿತ್ತು. ತನ್ನ ವೆಚ್ಚಕ್ಕೆ ಎಂಟು ಆಣೆ ಮಾತ್ರ ಇಟ್ಟುಕೊಂಡು ಉಳಿದದ್ದನ್ನು ತನ್ನ ತಾಯಿಯ ವಶಕ್ಕೇ ತಂದು ಕೊಟ್ಟುಬಿಡುತ್ತಿದ್ದ. ಮೊದಲನೆಯ ತಿಂಗಳು ಮಗ ಕೈಗೆ ದುಡ್ಡು ಹಾಕಿದ ದಿನವಂತೂ ತಾಯಿಯ ಸಂತೋಷ ಹೇಳಿತೀರದು: "ನನ್ನ ಮಗ ಆಗಲೇ ಸಂಪಾದಿಸುವುದಕ್ಕೆ ಮೊದಲುಮಾಡಿದ್ದಾನೆ. ಅವನು ದೊಡ್ಡ ಪ್ಯಾಸು ಮಾಡಿ ಅಮಲದಾರಿಕೆ ಮಾಡೇ ಮಾಡುತಾನೆ. ನನಗೆ ಗೊತ್ತಿದೆ" ಎಂದು ಹಿಗ್ಗುತ್ತ, "ದೇವರು ನಿನಗೆ ಒಳ್ಳೆಯದು ಮಾಡಲಿ" ಎಂದು ಮಗನನ್ನು ಆಶೀರ್ವಾದ ಮಾಡಿದರು. ಆಶೀರ್ವಾದದ ಮಾತು ಕೇಳಿದ ಕೂಡಲೆ ತಾಯಿಯ ಮೇಲೆ ಅಪಾರವಾದ ಪ್ರೀತಿ ಭಕ್ತಿಗಳು ಹುಟ್ಟಿದುವು ಅವನಲ್ಲಿ; ಒಡನೆಯೆ ತಾಯಿಯ ಕಾಲಿಗೆ ಎರಗಿದ.

"ಮಗೂ, ವಿದ್ಯಾವಂತನಾಗು; ಭಾಗ್ಯಲಕ್ಷ್ಮಿ ನಿನಗೆ ಒಲಿಯಲಿ. ಅಷ್ಟೈಶ್ವರ್ಯಸಂಪನ್ನನಾಗು. ಸದ್ಗುಣಸಂಪನ್ನೆಯಾದ ಹೆಂಡತಿ ಮದುವೆಯಾಗಿ ಹತ್ತುಮಕ್ಕಳು ಹಡೆದು ಸುಖವಾಗಿ ಬಾಳು, ಕಂದ" ಎಂದು ಮತ್ತೊಮ್ಮೆ ಹರಸಿದರು. ಹರಕೆಯಲ್ಲಿ ಅವರ ಹೃದಯವೇ ಕಿತ್ತುಬಂದಿತ್ತು. ತಡೆದುಕೊಳ್ಳುವುದಕ್ಕಾಗದೆ, ಹರ್ಷದುಃಖಸೂಚಕವಾದ ಕಂಬನಿ ಅವರ ಕಣ್ಣಿಂದ ಕೋಡಿವರಿಯಿತು. ನಾರಾಯಣಮೂರ್ತಿ ಎದ್ದು, ಪಕ್ಕದಲ್ಲೆ ನಿಂತಿದ್ದ ಅಕ್ಕನ ಮುಖ ನೋಡಿದ: ಅವಳ ಕಣ್ಣುಗಳಲ್ಲೂ ಕಂಬನಿ. ತಾಯಿಯ ಮುಖ ನೋಡಿದ: ಅವರು ಕಣ್ಣೀರು ಒರಸಿಕೊಳ್ಳುತ್ತಿದ್ದರು. ಕಣ್ಣೀರು ಏಕೆ ಎಂಬುದು ಅವನ ಬುದ್ಧಿಗೆ ಗೊತ್ತಾಗದೆ ಹೋದರೂ ಹೃದಯಕ್ಕೆ ಗೊತ್ತಾಯಿತು. ಅವನ ಕಣ್ಣುಗಳೂ ಕಂಬನಿಗರೆದುವು. ಗೌರಿ ಮಗುವನ್ನು ಅಪ್ಪುವಂತೆ ಅವನನ್ನು ಅಪ್ಪಿಕೊಂಡಳು. ಅವನ ಮನಸ್ಸು ಸಮಾಧಾನಕ್ಕೆ ಬಂದಿತು.

೩

## ಹುಡುಗಿಯ ಚೆನ್ನುಚಾರಿಗೆ ಮನಸೋತು ವಿದ್ಯೆಗೆ ಕಲ್ಲುಬೀಳುವ ಹಾಗೆ ಮಾಡಿಕೊಳ್ಳುವುದೆ ?

ಆ ವರ್ಷ ನಾರಾಯಣಮೂರ್ತಿಗೆ ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಅವನ ಬುದ್ಧಿಯೇನೋ ಚುರುಕೆ. ಆದರೂ ವ್ಯಾಸಂಗಕ್ಕೆ ಹೆಚ್ಚು ಬಿಡುವು ದೊರೆಯದೆ ಹೋಗುತ್ತಿದ್ದುದರಿಂದಲೂ, ಆಗಲೇ ಅವನ ಮನಸ್ಸು ಬಡತನದ ಕಷ್ಟವನ್ನು ಕುರಿತು ಯೋಚಿಸಹತ್ತಿದ್ದರಿಂದಲೂ, ಓದಿಗೆ ಬೇಕಾದ ಎಲ್ಲ ಪುಸ್ತಕಗಳು ಇಲ್ಲದ್ದರಿಂದಲೂ ಅವನು ಸಾಮಾನ್ಯ ದರ್ಜೆಯಲ್ಲಿ ಮಾತ್ರ ತೇರ್ಗಡೆ ಹೊಂದಿದ್ದ. ಬಡವನೆಂಬ ಒಂದು ಕಾರಣದಿಂದ ಅವನಿಗೆ ಮುಂದಿನ ತರಗತಿಯಲ್ಲೂ ಫ್ರೀಷಿಪ್ಪೇನೊ ಸಿಕ್ಕಿತು. ಅನಾಥಾಲಯದಲ್ಲೂ ಸ್ಥಳ ಸಿಕ್ಕಿ, ಅಷ್ಟು ಇಷ್ಟವಿಲ್ಲದಿದ್ದರೂ ಅಲ್ಲಿಗೆ ಸೇರಿಕೊಂಡ. ಇದರಿಂದ ಅವನಿಗೆ ವ್ಯಾಸಂಗಕ್ಕೆ ಸ್ವಲ್ಪ ಅನುಕೂಲವಾಯಿತು.

ನಾರಾಯಣಮೂರ್ತಿಗೆ ಹದಿನಾರು ವರ್ಷ ಮಾತ್ರ ಆಗಿತ್ತು, ಅಷ್ಟೆ. ಆಗಲೆ ಇಬ್ಬರು ಮೂವರು ಹೆಣ್ಣುಕೊಡಲು ಬಂದಿದ್ದರು. ಓದುವುದಕ್ಕೆ ಸಹಾಯ ಮಾಡುವುದಾಗಿ ಪ್ರತಿಯೊಬ್ಬರೂ ಹೇಳುತ್ತಿದ್ದರು. ಯಾವುದಾದರೂ ಒಳ್ಳೆಯ ಕಡೆಯ ಹೆಣ್ಣು ಸಿಕ್ಕಿದರೆ ಮಗನಿಗೆ ಮದುವೆ ಮಾಡಿಬಿಡಬೇಕೆಂದು ಅವನ ತಾಯಿಯೇನೊ ಹಂಬಲಿಸುತ್ತಿದ್ದರು. ಆದರೆ ಗೌರಿ ತಾಯಿಯ ಮಾತಿಗೆ ಒಪ್ಪುತ್ತಿರಲಿಲ್ಲ; ತಮ್ಮನಿಗೆ ಮೆಟ್ರಿಕ್ಯುಲೇಷನ್ ಪ್ಯಾಸಾದರೂ ಆಗಬೇಕೆಂದೂ, ಅಷ್ಟರಲ್ಲೆ ಮದುವೆ ಮಾಡಿದರೆ ಅವನ ವಿದ್ಯೆಗೆ ಅಡ್ಡಿಯಾಗು ವುದೆಂದೂ ಅವಳ ಅಭಿಪ್ರಾಯವಾಗಿತ್ತು. ನಾರಾಯಣಮೂರ್ತಿಗೂ ಅಷ್ಟು ಬೇಗನೆ ಮದುವೆ ಮಾಡಿಕೊಳ್ಳಬೇಕೆಂಬ ಅಭಿಪ್ರಾಯವಿರಲಿಲ್ಲ. ಅನಾಥಾಲಯ ದಲ್ಲೆ ಇದ್ದ ತನ್ನ ಗೆಳೆಯನೊಬ್ಬನಿಗೆ ಮದುವೆಯಾಗಿ, ಅವನಿಗೆ ಮಾವನವರು ತಿಂಗಳಿಗೆ ಮೂವತ್ತು ರೂಪಾಯಿ ಕಳಿಸುತ್ತಿದ್ದುದೂ, ಅವನು ಆ ಹಣ ದಿಂದ ಸುಖವಾಗಿ ವ್ಯಾಸಂಗ ನಡಸುವುದರ ಜೊತೆಗೆ ಮನೆಯ ಬಡ ಸಂಸಾರಕ್ಕೂ ತಕ್ಕಮಟ್ಟಿಗೆ ನೆರವಾಗುತ್ತಿದ್ದುದೂ ನಾರಾಯಣಮೂರ್ತಿಯ ಮನಸ್ಸಿಗೆ ಬಂದಾಗ ಅವನು ತಾನೂ ಏಕೆ ಮದುವೆಯಾಗಿಬಿಡಬಾರದು ಎಂದು

ಒಮ್ಮೊಮ್ಮೆ ಯೋಚಿಸುತ್ತಿದ್ದ. ಜೊತೆಗೆ, ಅಳಿಯತನದ ವೈಭವಕ್ಕೂ ಅವನ ಮನಸ್ಸು ಕೊಂಚ ಸೋಲದೆ ಇರಲಿಲ್ಲ. ಹೆಣ್ಣುಕೊಡಲು ಬಂದ ಇಬ್ಬರು ಮೂವರಿಗೆ ಆಗುವುದಿಲ್ಲವೆಂದು ಹೇಳಿಯಾಗಿತ್ತು; ಆ ವರ್ಷದ ಪರೀಕ್ಷೆಯಾದ ಮೇಲೆ ಅವನ ದೂರದ ಬಳಗದವರೊಬ್ಬರ ಶಿಫಾರಸಿನ ಮೇಲೆ ಒಬ್ಬರು ಹೆಣ್ಣಿನವರು ಬಂದಿದ್ದರು. ಉಳಿದವರಿಗೆ ಹೇಳಿದಂತೆ ಅವರಿಗೆ ಕೂಡಲೆ 'ಇಲ್ಲ' ಎಂದು ಹೇಳಲು ನಾರಾಯಣಮೂರ್ತಿಗಾಗಲಿ ಅವನ ತಾಯಿಗಾಗಲಿ ಮನಸ್ಸು ಬರಲಿಲ್ಲ. ವೆಂಕಮ್ಮ ಜವಾಬುದಾರಿಯನ್ನು ತನ್ನ ಮಗನ ಮೇಲೆ ಹಾಕಿದರು; ನಾರಾಯಣಮೂರ್ತಿ ಅದನ್ನು ತನ್ನ ಅಕ್ಕನಿಗೆ ವಹಿಸಿದ; ಗೌರಿ ನಿಸ್ಸಂಕೋಚವಾಗಿ ಹೆಣ್ಣಿನವರೊಡನೆ ಮಾತಾಡಿದಳು. ಹೆಣ್ಣಿನ ತಂದೆಗೆ ಅಳಿಯನನ್ನು ಓದಿಸುವ ಚೈತನ್ಯ ಇರಲಿಲ್ಲ; ಅವರಿಗೆ ಒಬ್ಬಳೆ ಮಗಳು; ತಮ್ಮ ಶ್ಯಾನುಭೋಗಿಕೆಯನ್ನೂ ಅಲ್ಪಸ್ವಲ್ಪ ಜಮೀನು ತೋಟಗಳನ್ನೂ ಅಳಿಯನಿಗೆ ಧಾರೆಯೆರೆದು ಕೊಡಲು ಸಿದ್ಧವಾಗಿದ್ದರು. ಇದು ಗೌರಿಗಾಗಲಿ ನಾರಾಯಣಮೂರ್ತಿಗಾಗಲಿ ಇಚ್ಛೆಗೆ ಬರಲಿಲ್ಲ. ಅವನ ಮನಸ್ಸಿನಲ್ಲಿ ಆಗ ಇದ್ದುದು ತಾನು ವಿದ್ಯಾವಂತನಾಗಬೇಕೆಂಬ ಒಂದು ಹೆಬ್ಬಯಕೆ. 'ಗಂಡಸಿಗೆ ಓದು ಒಡವೆ' ಎಂದು ತನ್ನ ತಾಯಿ ಆಗಿಂದಾಗ್ಗೆ ಹೇಳುತ್ತಿದ್ದುದು ಅವನ ಕಿವಿಗಳಲ್ಲಿ ಯಾವಾಗಲೂ ಮೊರೆಯುತ್ತಿತ್ತು. "ಅವರಂತೂ ವಿದ್ಯಾವಂತರಾಗಲಿಲ್ಲ; ನೀನಾದರೂ ವಿದ್ಯಾವಂತನಾಗಿ ವಂಶವನ್ನು ಬೆಳಗು, ಮಗು" ಎಂಬ ತನ್ನ ತಾಯಿಯ ಕೋರಿಕೆಯನ್ನು ಹೇಗಾದರೂ ಮಾಡಿ ಈಡೇರಿಸಬೇಕೆಂದು ಅವನು ಹಂಬಲಿಸುತ್ತಿದ್ದ. ಗಂಡುಮಕ್ಕಳು ಸಣ್ಣ ವಯಸ್ಸಿನಲ್ಲೆ ಮದುವೆಯಾಗುತ್ತಿದ್ದುದು ಆಗ ಅಪರೂಪವೇನೂ ಆಗಿರಲಿಲ್ಲ. ವಿದ್ಯಾಭ್ಯಾಸಕ್ಕೆ ಸಹಾಯ ದೊರೆಯುವುದಾದರೆ ಅವನು ಮದುವೆಗೆ ಒಪ್ಪುವುದಾಗಿಯೆ ಮನಸ್ಸುಮಾಡಿದ್ದ. ಅದರಿಂದ ತನ್ನ ತಾಯಿಗೂ ಅಕ್ಕನಿಗೂ ಒಂದು ದೊಡ್ಡ ಹೊರೆ ಇಳಿದಂತಾಗುವುದೆಂದು ಅವನ ಭಾವನೆ. ಗೌರಿಯ ಭಾವನೆಯೂ ಇದೇ ರೀತಿಯಾಗಿತ್ತು. ವಿದ್ಯೆಗೆ ಸಹಾಯ ದೊರೆತ ಹೊರತು ತನ್ನ ತಮ್ಮ ಮದುವೆಯಾಗುವುದಿಲ್ಲವೆಂದು ಅವಳು ಖಂಡಿತವಾದ ಉತ್ತರ ಕೊಟ್ಟುಬಿಟ್ಟಳು; ಅಕ್ಕನ ಮಾತಿಗೆ ತಮ್ಮನೂ ದನಿಗೂಡಿಸಿದ. ಹೆಣ್ಣಿನವರು ಪೆಚ್ಚುಮೋರೆ ಹಾಕಿಕೊಂಡು, ತಮ್ಮ ಕಡೆಯ ಪ್ರಾರ್ಥನೆಯನ್ನು ವೆಂಕಮ್ಮನವರ ಮುಂದಿಟ್ಟರು: "ಮದುವೆಯಾದರೆ ಅನಾಥಾಲಯದಲ್ಲಿ ಇರಿಸಿಕೊಳ್ಳುವುದಿಲ್ಲ

ಎನ್ನುವುದು ನಿಮ್ಮ ಶಂಕೆಯೇನೋ. ಅದಕ್ಕೇನು? ನಿಮ್ಮ ಮಗನಿಗೆ ಗುಟ್ಟಾಗಿ ನಮ್ಮ ಹಳ್ಳಿಯಲ್ಲೇ ಮದುವೆ ಮಾಡಿಬಿಟ್ಟರಾಯಿತು. ಅವನು ಅನಾಥಾಲಯದಲ್ಲೇ ಇರಲಿ. ನನ್ನ ಹೊಟ್ಟೆಬಟ್ಟೆ ಕಟ್ಟಿ ನಾನೂ ತಿಂಗಳಿಗೆ ಐದೋ ಹತ್ತೋ ಕಳಿಸುತ್ತೇನೆ. ಮುಂದಿನ ಮಾತು ಆಮೇಲೆ ವಿಚಾರ ಮಾಡೋಣ. ಮೊದಲು ನೀವು ಹೆಣ್ಣು ನೋಡಿ ಒಪ್ಪಿಬಿಡಿ" ಎಂದರು. ಮದುವೆಯೆ ಇಷ್ಟವಿಲ್ಲದಿರುವಾಗ ಇನ್ನು ಹೆಣ್ಣು ನೋಡುವುದೇಕೆ ಎಂದು ಗೌರಿಯ ಪ್ರಶ್ನೆ ; ಈ ವಿಷಯದಲ್ಲಿ ತಾಯಿಯೂ ಮಗನೂ ಗೌರಿಗೇ ಅಧಿಕಾರ ಕೊಟ್ಟು ಮೌನವಾಗಿದ್ದರು. ಹೆಣ್ಣಿನವರು ತಾವು ಮಗಳನ್ನು ಮೈಸೂರಿಗೇ ಕರೆದುಕೊಂಡು ಬಂದು ತಮ್ಮ ನಂಟರ ಮನೆಯಲ್ಲಿ ಇಳಿದಿರುವುದಾಗಿಯೂ, ಹೆಣ್ಣು ಕರೆದುಕೊಂಡು ಬರುವ ಕಷ್ಟವಿಲ್ಲದ್ದರಿಂದ ಹೇಗಾದರೂ ದೊಡ್ಡ ಮನಸ್ಸು ಮಾಡಿ ಹೆಣ್ಣು ನೋಡಲು ಬರಬೇಕೆಂದೂ ಆಹ್ವಾನ ಕೊಟ್ಟರು. ಹೆಣ್ಣು ನೋಡಲು ತಾವಾಗಲಿ ತಮ್ಮ ಮಗಳಾಗಲಿ ಬರುವುದು ಶುಭವಲ್ಲವೆಂದೂ, ತಮ್ಮ ಮಗನೊಬ್ಬನನ್ನೆ ಕರೆದುಕೊಂಡು ಹೋಗಬಹುದೆಂದೂ ವೆಂಕಮ್ಮ ಹೇಳಿದರು. ಹೆಣ್ಣನ್ನು ಊರಿಗೆ ಕರೆದುಕೊಂಡು ಬಂದಿರುವುದರಿಂದ ತಮ್ಮ ಮನೆಗೇ ಕರೆದುಕೊಂಡು ಬರುವುದಕ್ಕೆ ತೊಂದರೆಯೇನೆಂದು ಗೌರಿ ಕೇಳಿದಳು. ಗೌರಿಯ ಪ್ರಶ್ನೆಗೆ ತಟ್ಟನೆ ಉತ್ತರ ಕೊಡಲು ಹೆಣ್ಣಿನ ತಂದೆಗೆ ಏನೂ ತೋರಲಿಲ್ಲ. ಗೌರಿಯ ಮಾತಿನಂತೆ, ಇವರ ಮನೆಗೇ ಮಗಳನ್ನು ಕರೆದುಕೊಂಡು ಬರುವುದಾಗಿ ಹೆಣ್ಣಿನ ತಂದೆ ಒಪ್ಪಿದರು.

ಅದೇ ಮೇರೆಗೆ, ಹೆಣ್ಣಿನವರು ಹೆಣ್ಣನ್ನು ಕರೆದುಕೊಂಡು ಬಂದರು. ಹುಡುಗಿಯ ವಯಸ್ಸು ಹನ್ನೊಂದು, ಅಷ್ಟೆ. ಹೆಸರು, ಲಲಿತ. ಹೆಸರಿಗೆ ತಕ್ಕಂತೆ ಲಲಿತವಾಗಿದ್ದಳು. "ನಾವು ಸ್ವಲ್ಪ ಪೂರ್ವಾಚಾರದವರು. ಹುಡುಗಿಯ ಜಾತಕ ತಂದಿದ್ದರೆ, ಕೊಟ್ಟರೆ ಯಾರಿಗಾದರೂ ತೋರಿಸಿ ತಮಗೆ ಆಮೇಲೆ ಕಡೆಯಮಾತು ಹೇಳುತ್ತೇವೆ" ಎಂದರು ವೆಂಕಮ್ಮ. ತಮ್ಮ ಪ್ರಯತ್ನ ಅರ್ಧ ಹಣ್ಣಾಯಿತೆಂದು ಹೆಣ್ಣಿನ ತಂದೆ ಹಿಗ್ಗುತ್ತ, 'ಆಗಲಿ' ಎಂದು ಒಪ್ಪಿ, ಹೋದರು.

ಅವರು ಹೊರಟುಹೋದಮೇಲೆ, "ಹುಡುಗಿ ಒಳ್ಳೆ ಚೆನ್ನಾಗಿದ್ದಾಳಮ್ಮ! ನಾಣೂಗೆ ತಕ್ಕ ಹೆಣ್ಣು. ಹಾಡೂ ಚೆನ್ನಾಗಿ ಹೇಳಿದಳು. ಗುಣವೂ ಚೆನ್ನಾಗಿ ಇರುವ ಹಾಗೆ ಕಾಣುತ್ತೆ ಮುಖ ನೋಡಿದರೇನೆ" ಎಂದಳು ಗೌರಿ. ವೆಂಕಮ್ಮ

ಕೂಡ ಹುಡುಗಿಯನ್ನು ಮೆಚ್ಚಿ ಮಾತಾಡಿ, " ನಿನ್ನ ಅಭಿಪ್ರಾಯ ಏನೂ ?"– ಎಂದು ಕೇಳುವಂತೆ ಮಗನ ಕಡೆ ನೋಡಿದರು. "ಹುಡುಗಿ ಚೆನ್ನಾಗಿಲ್ಲವೇನೊ ? ಸುಳ್ಳು ಹೇಳಬೇಡ. ಹುಡುಗಿ ಚೆನ್ನಾಗಿಲ್ಲದೆ ಹೋದರೆ ಹೇಳಿಬಿಡು. ನಿನಗೆ ಇಷ್ಟವಿಲ್ಲದ ಹೆಣ್ಣನ್ನು ನಿನ್ನ ಕುತ್ತಿಗೆಗೆ ಕಟ್ಟುವುದಿಲ್ಲ" ಎಂದು ಗೌರಿ ತಮ್ಮನನ್ನು ಕೇಳಿದಳು. ನಾರಾಯಣಮೂರ್ತಿ ಸುಮ್ಮನಿದ್ದ ; ಕಣ್ಣಿನ ನೋಟದಲ್ಲಿ ನಸು ಲಜ್ಜೆ ಮಿನುಗುತ್ತಿತ್ತು ; ತುಟಿಯಲ್ಲಿ ಮುಗುಳುನಗೆ ಮೂಡಿತ್ತು. ಗೌರಿ ಅವನ ಮನಸ್ಸನ್ನು ಅರಿತು, ತಮ್ಮನ ಗಲ್ಲ ಹಿಡಿದು ಅಲುಗಿಸಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದಳು.

ನಾರಾಯಣಮೂರ್ತಿಯ ಮನಸ್ಸಿನಲ್ಲಿ ಒಂದು ಸಣ್ಣ ಹೋರಾಟ ನಡೆಯುತ್ತಿತ್ತು. ಹುಡುಗಿಯೇನೋ ಚೆನ್ನೇ. ಆದರೆ, ಹೆಣ್ಣಿನ ತಂದೆಯ ಮಾತುಗಳಲ್ಲಿ ತನ್ನ ವಿದ್ಯೆಗೆ ಸಾಕಷ್ಟು ಸಹಾಯ ದೊರೆಯುವ ಭರವಸೆ ಕಾಣ ಬರಲಿಲ್ಲ. ಹುಡುಗಿಯ ಚೆನ್ನು ಚಾರಿಗೆ ಮನಸೋತು ವಿದ್ಯೆಗೆ ಕಲ್ಲುಬೀಳುವಂತೆ ಮಾಡಿಕೊಳ್ಳುವುದೆ ? ಛೆ, ಅದು ಆಗದ ಮಾತು. ಜಾತಕ ಏನಾದರೂ ಕೂಡಿ ಬಂದಲ್ಲಿ, ಏನಾದರೂ ನೆಪ ತೆಗೆದು ತನಗೆ ಮದುವೆಗೆ ಇಷ್ಟವಿಲ್ಲವೆಂದು ಹೇಳಿ ಬಿಡುವುದು ; ಈ ಉತ್ತರ ಕೊಡುವ ಜವಾಬುದಾರಿಯನ್ನು ಮಾತಿನಲ್ಲಿ ಚತುರೆ ಯಾದ ಗೌರಿಯ ಮೇಲೆ ಹೊರಿಸುವುದು – ಎಂಬುದಾಗಿ ಅವನು ಒಂದು ರೀತಿಯ ನಿರ್ಧಾರಕ್ಕೆ ಬರಲು ಪ್ರಯತ್ನಿಸುತ್ತಿದ್ದ.

ಹೆಣ್ಣಿನ ತಂದೆ ಮಗಳ ಜಾತಕದ ನಕಲು ಕಳಿಸಿದರು. ವೆಂಕಮ್ಮನವರು ಅದನ್ನೂ ತಮ್ಮ ಮಗನ ಜಾತಕವನ್ನೂ ತಮಗೆ ನಂಬಿಕೆಯಿದ್ದ ಜೋಯಿಸರಿಗೆ ತೋರಿದರು. ಅವರು ಜಾತಕ ಏನೇನೂ ಹೊಂದುವುದಿಲ್ಲ ಎಂದುಬಿಟ್ಟರು. "ಇನ್ನೊಬ್ಬರಿಗೆ ತೋರಿಸಿ ನೋಡೋಣ" ಎಂದಳು ಗೌರಿ. ಇನ್ನೊಬ್ಬರಿಗೂ ತೋರಿಸಿದ್ದಾಯಿತು. ಅವರೂ ಅದೇ ಅಭಿಪ್ರಾಯ ಕೊಟ್ಟರು. ಜಾತಕಾನುಕೂಲ ಆಗಲಿಲ್ಲವೆಂದು ವೆಂಕಮ್ಮನವರು ಕಾಗದ ಬರಸಿದರು. ಈ ಮದುವೆಯ ಪ್ರಸ್ತಾಪ ಅಷ್ಟಕ್ಕೇ ನಿಂತುಹೋಯಿತು. ನಾರಾಯಣಮೂರ್ತಿಗೆ ಇದರಿಂದ ದುಃಖವೇನೂ ಆಗಲಿಲ್ಲ. ಆದರೂ, ಆ ಹುಡುಗಿಯ ಚಿತ್ರ ನಾರಾಯಣ ಮೂರ್ತಿಯ ಮನಸ್ಸಿನಲ್ಲಿ ಕೆಲಕಾಲ ನೆಲಸಿತ್ತು.

೪

## ಮತ್ತೆ ಭಿಕ್ಷಾನ್ನ

ನಾರಾಯಣಮೂರ್ತಿ ಈಗ ಮೆಟ್ರಿಕ್ಯುಲೇಷನ್ ಪರೀಕ್ಷೆಯ ತರಗತಿಯಲ್ಲಿ ಓದುತ್ತಿದ್ದ. ಕಷ್ಟಪಟ್ಟು ಚೆನ್ನಾಗಿ ಓದಿ ಮೊದಲನೆಯ ದರ್ಜೆಯಲ್ಲಿ ತೇರ್ಗಡೆ ಹೊಂದಬೇಕೆಂದು ಅವನು ಮನಸ್ಸುಮಾಡಿದ್ದ. ಅವನು ಅನಾಥಾಲಯದಲ್ಲಿ ಇದ್ದರೂ ಪ್ರತಿದಿನ ಸಂಜೆ ಮನೆಯಕಡೆ ಹೋಗಿ ಅಕ್ಕನನ್ನೂ ತಾಯಿಯನ್ನೂ ನೋಡಿಕೊಂಡು ಬರುತ್ತಿದ್ದ.

"ಪರೀಕ್ಷೆ ಮುಗಿದ ಕೂಡಲೆ ಮದುವೆ ಮಾಡಿಕೊಂಡುಬಿಡಪ್ಪ" ಎಂದು ವೆಂಕಮ್ಮನವರು ಆಗಾಗ್ಗೆ ಮಾತು ಹಾಕುತ್ತಿದ್ದರು. "ಪರೀಕ್ಷೆ ಒಂದು ಆಗಲಿ, ನೋಡೋಣ. ಈಗ ಮದುವೆಯ ಯೋಚನೆ ಯಾಕೆ? ಅವನು ಕಷ್ಟಪಟ್ಟು ಚೆನ್ನಾಗಿ ಓದಲಿ" ಎಂದು ಗೌರಿ ಚೆನ್ನಾಗಿ ವ್ಯಾಸಂಗಮಾಡುವಂತೆ ತಮ್ಮನನ್ನು ಹುರಿದುಂಬಿಸುತ್ತಿದ್ದಳು.

ವರ್ಷದ ನಡುವೆಯಲ್ಲಿ ಯಾರೂ ಹೆಣ್ಣಿನವರು ಬರಲಿಲ್ಲ. ನಾರಾಯಣ ಮೂರ್ತಿ ಚೆನ್ನಾಗಿ ಓದಹತ್ತಿದ್ದ. ವರ್ಷಾರ್ಧದ ಪರೀಕ್ಷೆಯಲ್ಲಿ ಅವನೇ ಮೊದಲನೆಯವನಾಗಿಯೂ ಬಂದ.

ಪರೀಕ್ಷೆ ಸಮೀಪಿಸಿದಂತೆಲ್ಲ ನಾರಾಯಣಮೂರ್ತಿ ನಿದ್ದೆಗೆಟ್ಟು ಓದಲು ಪ್ರಾರಂಭಿಸಿದ್ದ. ತನ್ನಲ್ಲಿ ಪಾಠದ ಪುಸ್ತಕಗಳು ಇಲ್ಲವೆಂಬ ನೆವದಿಂದ ಅವನು ಯಾವುದನ್ನೂ ಓದದೆ ಬಿಡುತ್ತಿರಲಿಲ್ಲ. ತನ್ನಲ್ಲಿ ಇಲ್ಲದೆ ಇದ್ದ ಪುಸ್ತಕಗಳನ್ನು ಗೆಳೆಯರಿಂದ ಎರವಲು ಪಡೆದು ಓದುತ್ತಿದ್ದ. ಯಾವ ಕಾರಣದಿಂದಲೂ ವ್ಯಾಸಂಗ ಮಾಡಬೇಕಾದ ಯಾವ ಭಾಗವನ್ನೂ ಅವನು ಓದದೆ ಇರುತ್ತಿರಲಿಲ್ಲ. ಜೊತೆಯವರೂ ಅವನ ಕೆಲವು ಉಪಾಧ್ಯಾಯರೂ ಅವನು ಸಂಸ್ಥಾನಕ್ಕೇ ಮೊದಲನೆಯವನಾಗಿ ಬರುತ್ತಾನೆ, ಕಡೆಗೆ ಮೊದಲನೆಯ ವರ್ಗದಲ್ಲಾದರೂ ಖಂಡಿತ ತೇರ್ಗಡೆ ಹೊಂದುತ್ತಾನೆ ಎಂದು ನಿರೀಕ್ಷಿಸುತ್ತಿದ್ದರು.

ಪರೀಕ್ಷೆ ಮೊದಲಾಯಿತು. ಎರಡು ದಿನದ ಪ್ರಶ್ನಪತ್ರಿಕೆಗಳಿಗೆ ನಾರಾಯಣಮೂರ್ತಿ ಬಹಳ ಚೆನ್ನಾಗಿ ಉತ್ತರಗಳನ್ನು ಬರೆದಿದ್ದ. ಆದರೆ

ಮೂರನೆಯ ದಿನ ಪರೀಕ್ಷೆಯ ಭವನದಲ್ಲಿ ಅವನಿಗೆ ಬಹಳ ಜ್ವರ ಬಂದಿತು. ಹಾಗೆಯೇ ಮನೆಗೆ ಹಿಂದಿರುಗಿದ. ಬಂದ ಜ್ವರ ಎಂಟು ದಿನ ಬಿಡಲೇ ಇಲ್ಲ. ಅವನ ಆಸೆಯೆಲ್ಲ ಮಣ್ಣುಗೂಡಿತು.

ಅದರ ಮುಂದಿನ ವರ್ಷ ನಾರಾಯಣಮೂರ್ತಿಗೆ ಅನಾಥಾಲಯದಲ್ಲಿ ಸ್ಥಳ ಸಿಕ್ಕಲಿಲ್ಲ. ಫ್ರೀಷಿಪ್ಪೂ ಸಿಕ್ಕಲಿಲ್ಲ. ವರ್ಷಾರ್ಧದ ಪರೀಕ್ಷೆಯಲ್ಲಿ ಚೆನ್ನಾಗಿಮಾಡಿದರೆ ಅರ್ಧ ಫ್ರೀಷಿಪ್ ಕೊಡುವುದಾಗಿ ಮುಖ್ಯೋಪಾಧ್ಯಾಯರು ಭರವಸೆ ಕೊಟ್ಟರು. ನಾರಾಯಣಮೂರ್ತಿಗೆ ಕಷ್ಟಕ್ಕಿಟ್ಟುಕೊಂಡಿತು. ಹೇಗಾದರೂ ಹೊಟ್ಟೆಬಟ್ಟೆ ಕಟ್ಟಿ ಫೀಜು ಕೊಡುವುದಾಗಿ ತಾಯಿ ಹೇಳಿದರು. ಕಳೆದ ಪರೀಕ್ಷೆಗೆ ಹಣ ಕಟ್ಟುವುದಕ್ಕೆ ಗೌರಿ ತನ್ನ ಒಂದು ಚಿನ್ನದ ಬಳೆ ಮಾರಿ ಹಣ ಒದಗಿಸಿದ್ದಳು. ಅವಳ ಬಳಿ ಇನ್ನು ಮೂರು ಬಳೆಗಳಿದ್ದುವು. ಫೀಜಿಗೆ ಹಣಕ್ಕಾಗಿ ಎರಡು ಬಳೆ ಮಾರುವುದಾಗಿ ಗೌರಿ ಮುಂದೆಬಂದಳು. ತನ್ನವರಿಗೆ ಯಾವ ಬಗೆಯ ಕಷ್ಟ ಕೊಡುವುದಕ್ಕೂ ಇಷ್ಟಪಡದೆ ನಾರಾಯಣಮೂರ್ತಿ ಮನೆಯಲ್ಲೇ ವ್ಯಾಸಂಗಮಾಡಿ ಪರೀಕ್ಷೆಗೆ ಹೋಗುವುದಾಗಿ ನಿರ್ಧರಿಸಿ, ಶಾಲೆಯನ್ನು ಬಿಟ್ಟುಬಿಟ್ಟ. ಗೌರಿ ಪರೀಕ್ಷೆಗೆ ಕಟ್ಟುವುದಕ್ಕೆ ಒದಗಿಸಿದ್ದ ಹಣದಲ್ಲಿ ಸ್ವಲ್ಪ ಉಳಿದಿತ್ತು: ಆ ಮೊಬಲಗಿನಿಂದ ಅತ್ಯಾವಶ್ಯಕವಾದ ಕೆಲವು ಪುಸ್ತಕಗಳನ್ನು ಕೊಂಡುಕೊಂಡು ಮನೆಯಲ್ಲೇ ವ್ಯಾಸಂಗಕ್ಕೆ ಮೊದಲುಮಾಡಿದ. ತಾಯಿ ಬೇಡವೆಂದರೂ ಕೇಳದೆ, ಮತ್ತೆ ಭಿಕ್ಷಾನ್ನಕ್ಕೆ ಮೊದಲುಮಾಡಿದ.

## ೫

## ' ಜಯಲಕ್ಷ್ಮಿ! ಹೆಸರು ಚೆನ್ನಾಗಿದೆ! '

ಜುಲೈ ತಿಂಗಳು ಪ್ರಾರಂಭವಾಗಿತ್ತು. ನಾರಾಯಣಮೂರ್ತಿ ಭಿಕ್ಷಾನ್ನಕ್ಕೆ ಹೋಗಿದ್ದ. ಗೌರಿ ನಾರಾಯಣಮೂರ್ತಿಯ ಕನ್ನಡ ಪುಸ್ತಕಗಳನ್ನು ಓದುತ್ತ ಕುಳಿತಿದ್ದಳು. ವೆಂಕಮ್ಮ ಅಡಿಗೆ ಮಾಡುತ್ತಿದ್ದರು. ' ವೆಂಕಮ್ಮಾ ' ಎಂದು ಪರಿಚಿತಧ್ವನಿಯಲ್ಲಿ ಕೂಗಿಕೊಂಡು ಒಬ್ಬರು ಒಳಕ್ಕೆ ಬಂದರು. ಅಡಿಗೆ ಮಾಡುತ್ತಿದ್ದ ವೆಂಕಮ್ಮ ಹಿಂದಿರುಗಿ ನೋಡಿ – " ಓಹೋ ! ಏನು

ಸುಬ್ಬಯ್ಯ, ಯಾವಾಗ ಬಂದೆ? ಊರ ಕಡೆ ಎಲ್ಲ ಕ್ಷೇಮವೆ ?" ಎಂದು ಕೇಳುತ್ತ ಎದ್ದುಬಂದರು. "ಕೂತುಕೊಳ್ಳಿ ಸುಬ್ಬಯ್ಯಮಾವಯ್ಯ" ಎಂದು ಗೌರಿ ಎದ್ದು ಚಾಪೆ ಹಾಸಿ, ದೂರ ಕುಳಿತಳು. ಸುಬ್ಬಯ್ಯ ಚಾಪೆಯ ಮೇಲೆ ಕುಳಿತು ಸಾವಕಾಶವಾಗಿ ಮಾತಿಗೆ ಪ್ರಾರಂಭಿಸಿದರು.

ಸುಬ್ಬಯ್ಯ ವೆಂಕಮ್ಮನವರ ದೂರದ ಸಂಬಂಧೀಕರು; ಬಾಲ್ಯದಲ್ಲಿ ಆಕೆಯ ತವರೂರಿನಲ್ಲೆ – ಎಂದರೆ, ಅತ್ತಿಗುಪ್ಪೆ (ಕೃಷ್ಣರಾಜಪೇಟೆ) ಯಲ್ಲೆ – ಇದ್ದವರು. ಅವರು ಶಾಲೆಯ ಉಪಾಧ್ಯಾಯರಾದ್ದರಿಂದ ಕೆಲಕೆಲವು ವರ್ಷ ಒಂದೊಂದು ಸ್ಥಳದಂತೆ ಸಂಸ್ಥಾನದ ಎಂಟೂ ಜಿಲ್ಲೆಗಳಲ್ಲಿ ಸುತ್ತಾಡಿದ್ದರು. ಸದ್ಯದಲ್ಲಿ ಅವರಿಗೆ ಶ್ರೀರಂಗಪಟ್ಟಣಕ್ಕೆ ವರ್ಗವಾಗಿ ವರ್ಷದ ಮೇಲಾಗಿತ್ತು.

"ಸುಬ್ಬಯ್ಯ, ನಿನ್ನನ್ನು ನೋಡಿ ಎಷ್ಟೋ ವರ್ಷಗಳಾಗಿ ಹೋಯಿತು. ಒಂದು ಸಲವಾದರೂ ಬಡವರಾದ ನಮ್ಮ ನೆನಪಾಗಬೇಡವೆ ?" ಎಂದು ಕೇಳಿದರು ವೆಂಕಮ್ಮ.

"ಬಡವರ್‍ಯಾರು ಭಾಗ್ಯವಂತರ್‍ಯಾರು ವೆಂಕಕ್ಕ. ಎಲ್ಲ ಪರಮಾತ್ಮನ ಲೀಲೆ. ಇವೊತ್ತು ಬಡವರಾಗಿರುವವರು ನಾಳೆ ಭಾಗ್ಯವಂತರಾಗುತ್ತಾರೆ, ಭಾಗ್ಯವಂತರಾಗಿರುವವರು ಭಿಕಾರಿಗಳಾಗುತ್ತಾರೆ. ಭಾಗ್ಯಲಕ್ಷ್ಮಿ ಚಂಚಲೆ. ಅವಳು ಒಂದುಕಡೆ ಸ್ಥಿರವಾಗಿ ನೆಲಸಿರುವುದಿಲ್ಲ. ಕಿಟ್ಟಣ್ಣ (ಎಂದರೆ, ವೆಂಕಟಕೃಷ್ಣಯ್ಯ, ವೆಂಕಮ್ಮನವರ ಯಜಮಾನರು) ಬಡವನಾಗಿ ಹುಟ್ಟಿದ ; ಸಾಯುವಾಗಲೂ ಬಡವನಾಗಿಯೆ ಸತ್ತ ; ನಿಮ್ಮನ್ನು ನಡುನೀರಿನಲ್ಲಿ ಕೈಬಿಟ್ಟ. ಅವನೇನು ಮಾಡುತ್ತಾನೆ ಪಾಪ, ಅವನ ಹಣೆಬರಹ. ಅತ್ತಿಗುಪ್ಪೆ ಹತ್ತಿರ ಅವನಿಗೂ ಪಿತ್ರಾರ್ಜಿತ ಭೂಮಿ ಹತ್ತು ಎಕರೆ ಇತ್ತು. ಪಾಳುಗಂದಾಯ ತೆತ್ತೂ ತೆತ್ತೂ ಸಾಲಿಗನಾದ. ನಾಲೆ ಬರುತ್ತೆ, ನಿನ್ನ ಬರಡುಭೂಮಿ ಜಮೀನು ಆಗುತ್ತೆ, ಸ್ವಲ್ಪ ತಾಳು, ಏಕೆ ದುಡುಕುತ್ತಿ ಅಂತ ಎಷ್ಟೋ ಹೇಳಿದೆ. ಹೋದಷ್ಟಕ್ಕೆ ಸೀದುಬಿಟ್ಟ."

"ಸೀಯದೆ ಇನ್ನೇನು ಮಾಡುತ್ತಾರಪ್ಪ. ಅವರೂ ನಿನ್ನ ಹಾಗೇ ಮೇಷ್ಟರು. ಊರೂರು ಸುತ್ತುತ್ತ ಇದ್ದರು. ಸ್ಥಳವೊಂದಿಗರಾಗಿದ್ದರೆ ಅದೇ ಬೇರೆಯ ಮಾತು. ಗೌರಿಯ ಮದುವೆ ಮಾಡಬೇಕಾಗಿತ್ತು ; ಸಾಲ ಶೂಲವಾಯಿತು. ಮಾರಿಬಿಟ್ಟರು. ಆ ದುಡ್ಡೂ ಸಾರ್ಥಕವಾಗಲಿಲ್ಲ. ಗೌರಿಯ ಹಣೆ ಬರಹ ಹೀಗಿತ್ತು" ಎಂದು ವೆಂಕಮ್ಮ ಕಂಬನಿದುಂಬಿದರು.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಆಮೇಲೆ ಸುಬ್ಬಯ್ಯ ಮಾತು ಬದಲಾಯಿಸಿ, ಆ ಮಾತು ಈ ಮಾತು ತೆಗೆದು, ನಾರಾಯಣಮೂರ್ತಿಯ ವಿಚಾರ ತೆಗೆದರು :

" ವೆಂಕಕ್ಕ, ನಿನಗೆ ಒಬ್ಬನೇ ಮಗ. ಅವನು ಓದು ಬಿಡುತ್ತೇನೆಂದರೂ ಬಿಡಿಸಬಾರದು. ಹೇಗಾದರೂ ಮಾಡಿ ಮುಂದಕ್ಕೆ ಓದಿಸಬೇಕು."

" ಹೇಗಾದರೂ ಮಾಡಿ ಹೇಗಪ್ಪ ಮುಂದಕ್ಕೆ ಓದಿಸುವುದು ? ನಮ್ಮ ಸ್ಥಿತಿ ನೀನು ಕಾಣೆಯಾ ?"

" ಏನೋ, ಅನುಕೂಲಸ್ಥರ ಮನೆಯ ಹೆಣ್ಣು ಬಂದರೆ . . . ಸಾಧ್ಯ ಅಂತ ತೋರುತ್ತೆ . . . " ಎಂದು ಸುಬ್ಬಯ್ಯ ರಾಗ ತೆಗೆದರು.

ವೆಂಕಮ್ಮ ಮೌನವಾಗಿದ್ದರು ; ಸುಬ್ಬಯ್ಯ ಯಾವುದೋ ಮದುವೆಯ ಪ್ರಸ್ತಾಪಕ್ಕೆ ಬಂದಿದ್ದಾನೆ, ಅವನು ಹೇಳುವುದನ್ನು ಕೇಳಿಬಿಡೋಣ – ಎಂಬ ಕುತೂಹಲ ಅವರ ಬಿಟ್ಟ ಕಣ್ಣು ಬಾಯಿಗಳಲ್ಲಿ ಹಣಿಕುತ್ತಿತ್ತು. ವಾಸ್ತವವಾಗಿ ಸುಬ್ಬಯ್ಯ ಬಂದದ್ದಾದರೂ ಅದೇ ಉದ್ದೇಶದಿಂದ. ವೆಂಕಮ್ಮನವರ ಕುತೂಹಲಯುಕ್ತವಾದ ಮೌನದ ಅರ್ಥವನ್ನು ಗ್ರಹಿಸಿ ಸುಬ್ಬಯ್ಯ ತಮ್ಮ ಭೇಟಿಯ ಉದ್ದಿಷ್ಟ ವಿಚಾರದ ಮಾತನ್ನು ನೇರವಾಗಿ ಮೊದಲುಮಾಡಿದರು :

" ಅತ್ತಿಗುಪ್ಪೆಯ ನಾಗಪ್ಪನವರು ಗೊತ್ತಿಲ್ಲವೆ ? "

ವೆಂಕಮ್ಮನವರು – " ಯಾರು, ನಮ್ಮ ಜಮೀನು ಕೊಂಡರಲ್ಲ ಆ ನಾಗಪ್ಪನೆ ?" ಎಂದು ಕುತೂಹಲದಿಂದ ಕೇಳಿದರು.

" ಹೂಂ, ಅವರೆ."

" ನಮ್ಮ ಗೌರಿ ಮೂರು ವರ್ಷದ ಹುಡುಗಿಯಾಗಿದ್ದಾಗ ಅವರು ನಾಗರ ಪ್ರತಿಷ್ಠೆ ಮಾಡಿಸಿದರು. ಒಳ್ಳೆ ವಿಜೃಂಭಣೆಯಿಂದ ಮಾಡಿಸಿದರು. ಊರ ಸಂತರ್ಪಣೆ ಮಾಡಿಸಿದರು. ಮನುಷ್ಯ ಒಳ್ಳೆ ಧಾರಾಳಿ. ಆಮೇಲೆ ಮೂರು ನಾಲ್ಕು ತಿಂಗಳಿಗೇ ನಾವು ಊರು ಬಿಟ್ಟುಬಿಟ್ಟೆವು. ಮಕ್ಕಳೇ ಇರಲಿಲ್ಲ ಪಾಪ ಅವರಿಗೆ. ಎರಡು ಮೂರು ಹೆಣ್ಣುಗಳಾಗಿ ಸತ್ತುಹೋಗಿದ್ದುವು. ಒಂದು ಗಂಡು ಮಗು ಆಯಿತೆಂದು ಕೇಳಿದ್ದೆ."

" ಆ ಗಂಡು ಮಗೂನೂ ತೀರಿಹೋಯಿತಂತೆ. ಆಮೇಲೆ ಒಂದೇ ಹೆಣ್ಣಾಯಿತು. ಈಚೆಗೆ ಮಕ್ಕಳೇ ಇಲ್ಲ. ಒಬ್ಬಳೇ ಮಗಳು."

"ಒಳ್ಳೆ ಆಸ್ತಿವಂತರು. ಒಂದು ಗಂಡು ಮಗು ಆಗಿದ್ದರೆ ಚೆನ್ನಾಗಿತ್ತು."

"ಎಲ್ಲ ಹಣೆಬರಹ. ತನ್ನ ತಮ್ಮನ ಮಗನನ್ನೆ ದತ್ತು ತೆಗೆದುಕೊಳ್ಳ ಬೇಕೆಂದು ಮಾಡಿದಾನೆ. ತಮ್ಮನಿಗೂ ಒಬ್ಬ ಮಗ, ಒಬ್ಬಳು ಮಗಳು, ಅಷ್ಟೆ."

"ತಮ್ಮನೂ ಅಲ್ಲೇ ಇದಾನೆ ಅಲ್ಲವೆ?"

"ಹೌದು. ನಾಗಪ್ಪ ಆದಷ್ಟು ಬೇಗ ಮಗಳಿಗೆ ಮದುವೆ ಮಾಡಿಬಿಟ್ಟು ಆಮೇಲೆ ದತ್ತು ತೆಗೆದುಕೊಳ್ಳಬೇಕೆಂದು ಮಾಡಿಕೊಂಡಿದಾರೆ. ತಮ್ಮನ ಮಗಳೂ ಮದುವೆಗೆ ನೆರೆದಿದಾಳೆ. ನಾಗಪ್ಪನ ಮಗಳಿಗಿಂತ ಒಂದು ವರ್ಷ ಚಿಕ್ಕವಳು. ನಾಗಪ್ಪನ ಮಗಳಿಗೆ ಈಗ ಹನ್ನೆರಡನೆಯ ವಯಸ್ಸು. ಸಾಧ್ಯ ವಾದರೆ ಇಬ್ಬರು ಹೆಣ್ಣುಮಕ್ಕಳಿಗೂ ಒಟ್ಟಿಗೆ ಮದುವೆ ಮಾಡಬೇಕೆಂದು ಅಣ್ಣ ತಮ್ಮ ಇಬ್ಬರೂ ನಿಶ್ಚಯ ಮಾಡಿಕೊಂಡಿದಾರೆ."

"ಈಗೇನು ನಾಗಪ್ಪನವರು ಕಳಿಸಿಕೊಟ್ಟಿದ್ದಾರೋ, ಇಲ್ಲಾ . . . ."

"ನಾಗಪ್ಪನವರೇ ಕಳಿಸಿಕೊಟ್ಟಿರೋದು. ಇಬ್ಬರ ಜಾತಕವನ್ನೂ ಕೊಟ್ಟಿದಾರೆ. ನಾಗಪ್ಪನವರೇನೊ ನನಗೆ ಇಷ್ಟು ಖಂಡಿತವಾಗಿ ಹೇಳಿದಾರೆ: ಹುಡುಗನಿಗೆ ಕೊಡುವುದೆಲ್ಲ ಕೊಡುತ್ತಾರಂತೆ; ಹುಡುಗನ ಹೆಸರಿನಲ್ಲಿ ಬ್ಯಾಂಕಿನಲ್ಲಿ ಐನೂರು ರೂಪಾಯಿ ಇಡುತ್ತಾರಂತೆ; ವಿದ್ಯೆಗಾಗಿ ತಿಂಗಳು ತಿಂಗಳಿಗೆ ಬೇಕಾದರೂ ಸಹಾಯ ಮಾಡುತ್ತಾರಂತೆ, ಇಲ್ಲದೆ ಹೋದರೆ ಒಟ್ಟಿಗೆ ಒಂದು ಸಾವಿರ ರೂಪಾಯಿ ಬೇಕಾದರೂ ಕೊಡುತ್ತಾರಂತೆ; ಅಲ್ಲದೆ ಕಿಟ್ಟಪ್ಪನಿಂದ ತಾವು ಕೊಂಡುಕೊಂಡ ಹತ್ತು ಎಕರೆ ಜಮೀನನ್ನೂ ಅವನ ಮಗ ನಾರಾಯಣ ಮೂರ್ತಿಗೇ – ಕಂಕಣ ಕೂಡಿಬಂದರೆ – ಧಾರೆ ಎರೆದು ಕೊಡುವ ಉದ್ದೇಶ ಮಾಡಿದಾರಂತೆ. ನಾರಾಯಣಮೂರ್ತಿಯಲ್ಲದೆ ಬೇರೆ ವರನಾದರೆ ಜಮೀನು ಬಳುವಳಿ ಕೊಡುವುದಿಲ್ಲವಂತೆ. ನಾಗಪ್ಪನವರ ಮಗಳ ಜಾತಕಾನುಕೂಲ ಆದರೆ ನನಗೇನೊ ಸಂತೋಷ. ಆ ಹುಡುಗಿಯನ್ನು ನಿಮ್ಮ ಮನೆಗೆ ತಂದು ಕೊಂಡರೆ ಭಾಗ್ಯಲಕ್ಷ್ಮಿಯನ್ನೇ ಬರಮಾಡಿಕೊಂಡ ಹಾಗೆ. ನಾಗಪ್ಪನವರ ತಮ್ಮ ಏನು ಕೊಡುತ್ತಾನೋ ಬಿಡುತ್ತಾನೋ ಅದೊಂದೂ ಹೇಳಿಲ್ಲ. ಅವನೂ ತಕ್ಕಮಟ್ಟಿಗೆ ಕೊಟ್ಟುಗಿಟ್ಟು ಮಾಡಿಯಾನು ಅಂತ ತೋರುತ್ತೆ. ಅವನಿಗೆ ಒಬ್ಬ ಮಗ ಬೇರೆ ಇದಾನೆ. ಅಲ್ಲದೆ ಅಣ್ಣನಷ್ಟು ಧಾರಾಳಿಯಲ್ಲ. ಇಷ್ಟರಮೇಲೆ ಹೇಗೋ ನಾನು ಹೇಳಲಾರೆ. ನಾಗಪ್ಪನವರೇ, ತಮ್ಮನ ಮಗಳ ಜಾತಕವೂ

ಇರಲಿ, ಒಂದು ಕೂಡದೆ ಹೋದರೆ ಇನ್ನೊಂದಾದರೂ ಕೂಡಿಬರಲಿ ಅಂತ ಎರಡನ್ನೂ ಕಳಿಸಿದಾರೆ. ನೋಡಮ್ಮ, ಎಲ್ಲವನ್ನೂ ಹೇಳಿರುತ್ತೇನೆ. ಒಳ್ಳೆಯ ಕಡೆಯ ಸಂಬಂಧ. ಹೆಣ್ಣು ತಂದುಕೊಳ್ಳಬಹುದು."

"ಎಲ್ಲ ಸರಿಯೆ. ನಾರಾಯಣಮೂರ್ತಿ ಆಗಬಹುದು ಎಂದರೆ . . . ನನ್ನದೇನೂ ಅಡ್ಡಿ ಇಲ್ಲ" ಎಂದರು ವೆಂಕಮ್ಮ.

ಅಷ್ಟುಹೊತ್ತಿಗೆ ಸರಿಯಾಗಿ ನಾರಾಯಣಮೂರ್ತಿ ಭಿಕ್ಷಾನ್ನದಿಂದ ಹಿಂದಿರುಗಿ ಬಂದ.

"ಅಕೊ, ಅವನ ಹೆಸರು ಎತ್ತುವ ಹೊತ್ತಿಗೆ ಸರಿಯಾಗಿ ಬಂದ. ಅವನಿಗೆ ನೂರು ವರ್ಷ ಆಯಸ್ಸು" ಎಂದರು ಸುಬ್ಬಯ್ಯ.

ನಾರಾಯಣಮೂರ್ತಿ ಕೈಕಾಲು ತೊಳೆದುಕೊಂಡು ಬಂದು ಸುಬ್ಬಯ್ಯನ ಹತ್ತಿರ ಕುಳಿತ. ಸುಬ್ಬಯ್ಯ ತಾವು ಇದುವರೆಗೆ ವೆಂಕಮ್ಮನವರಿಗೆ ಹೇಳಿದ್ದೆಲ್ಲವನ್ನೂ ನಾರಾಯಣಮೂರ್ತಿಗೆ ಮಗುಚಿ ಹೇಳಿದರು. ನಾಗಪ್ಪನವರ ಗುಣವನ್ನೂ ಹುಡುಗಿಯ ಶೀಲವನ್ನೂ ಅವನೆದುರು ಮನಮುಟ್ಟುವಂತೆ ಬಣ್ಣಿಸಿದರು. ಒಂದು ಅಂಶ ಕೇಳಿ ತಿಳಿದುಕೊಳ್ಳಬೇಕೆಂದು ಗೌರಿಗೆ ಮೊದಲಿನಿಂದಲೂ ಬಹಳ ಕುತೂಹಲ ಇತ್ತು. ಈಗ ನಾರಾಯಣಮೂರ್ತಿ ಬೇರೆ ಬಂದಿದ್ದ. ಕೇಳಿಬಿಟ್ಟಳು:

"ಸುಬ್ಬಯ್ಯ ಮಾವಯ್ಯ, ಹುಡುಗಿ ಹೇಗಿದಾಳೆ?"

"ಬಹಳ ಲಕ್ಷಣವಾಗಿದಾಳೆ. ಕಣ್ಣು ಮೂಗು ಎಲ್ಲ ಹೇಳಿ ಮಾಡಿಸಿದ ಹಾಗಿದೆಯಮ್ಮಾ. ನಾರಾಯಣಮೂರ್ತಿಗಂತೂ ವರಸಾಮ್ಯ ಬಹಳ ಚೆನ್ನಾಗಿ ಆಗುತ್ತೆ" ಎಂದು ಸುಬ್ಬಯ್ಯ ಬಾಯಿತುಂಬ ಹೊಗಳಿದರು.

"ಹುಡುಗಿಯನ್ನ ನೋಡಬೇಕಲ್ಲ?" ಎಂದರು ವೆಂಕಮ್ಮ.

"ಮೊದಲು ಮದುವೆಗೆ ಒಪ್ಪಿದರೆ ಆಮೇಲೆ ಹುಡುಗಿಯನ್ನ ನೋಡುವುದು ಬಿಡುವುದು ಎಲ್ಲ. ಮೊದಲು ನಾರಾಯಣಮೂರ್ತಿ ಏನು ಹೇಳುತ್ತಾನೆ ಕೇಳೋಣ" ಎಂದಳು ಗೌರಿ.

"ನಾನು ಹೇಳುವುದೇನು? ಅಮ್ಮ ನೀನು ಒಪ್ಪಿದರೆ ಆಗಬಹುದು."

"ನಮಗೇನೋ ಒಪ್ಪಿಗೆಯಪ್ಪ. ಏನೇ ಗೌರಿ? ನೀನು ಬೇಕಾದರೆ ಹುಡುಗಿಯನ್ನು ನೋಡು. ನೀನು ಹುಡುಗಿಯನ್ನು ಒಪ್ಪಿಬಿಟ್ಟರೆ ಎಲ್ಲರೂ ಒಪ್ಪಿದ ಹಾಗಾಯಿತು."

ನಾರಾಯಣಮೂರ್ತಿ ಸುಮ್ಮನಿದ್ದ.

"ಸರಿ, ಸುಬ್ಬಯ್ಯ. ಜಾತಕ ಕೊಟ್ಟು ಹೋಗು. ನಾನು ನೋಡಿಸಿರುತ್ತೇನೆ. ಹೆಣ್ಣಿನವರು ಹುಡುಗಿಯನ್ನು ಕರೆದುಕೊಂಡು ಬರಲಿ."

"ಯಾವ ಹುಡುಗಿಯನ್ನ ಅಂತ ಕರೆದುಕೊಂಡು ಬರುವುದಮ್ಮ. ಮೊದಲು ಜಾತಕ ನೋಡಿಸಿಬಿಡೋಣ. ನಾಗಪ್ಪನವರ ಮಗಳೇ ಆದರೆ, ನಾನು ಈಗಲೇ ಹೇಳಿಬಿಡುತ್ತೇನೆ: ಪಾಪ, ಅವರಿಗೆ ಏನೋ ಅಸಂಗತವಂತೆ. ನನ್ನ ಬಳಿ ರೈಲು ಚಾರ್ಜು ಕೊಟ್ಟು ಕಳಿಸಿದಾರೆ. ಮುಕ್ಕಾಲುಪಾಲು ಹಿರೋಡೆಗೆ ಗಾಡೀನೂ ಕಳಿಸಿರುತ್ತಾರೆ ಅಂತ ಕಾಣುತ್ತೆ. ಅಂತೂ, ಹುಡುಗನನ್ನು ಕರೆದುಕೊಂಡು ಬನ್ನಿ ಸಾಧ್ಯವಾದರೆ ಅಂತ ತಿಳಿಸಿದಾರೆ. ಜಾತಕ ಕೂಡಿಬಂದರೆ ನಾಳೆಯೇ ನಾರಾಯಣಮೂರ್ತಿಯನ್ನು ಕಳಿಸಿಕೊಡು."

ವೆಂಕಮ್ಮ ಆಗಲಿ ಎಂದು ಒಪ್ಪಿಕೊಂಡರು. ಮಧ್ಯಾಹ್ನದ ಮೇಲೆ ನಾರಾಯಣಮೂರ್ತಿ ಸುಬ್ಬಯ್ಯ ಇಬ್ಬರೂ ಜೋಯಿಸರ ಮನೆಗೆ ಹೋದರು. ಜೋಯಿಸರು ನಾರಾಯಣಮೂರ್ತಿಯ ಜಾತಕವನ್ನು ಇಬ್ಬರು ಹುಡುಗಿಯರ ಜಾತಕಗಳೊಡನೆಯೂ ಬಹಳ ಹೊತ್ತು ಹೋಲಿಸಿ ನೋಡಿ, ನಾಗಪ್ಪನವರ ಮಗಳು ಜಯಲಕ್ಷ್ಮಿಯ ಜಾತಕ ಬಹಳ ಪ್ರಶಸ್ತವಾಗಿ ಕೂಡಿಬರುತ್ತದೆಂದೂ ಇನ್ನೊಂದು ಜಾತಕ ಅಷ್ಟು ಹೊಂದುವುದಿಲ್ಲವೆಂದೂ ನುಡಿದರು. ಸುಬ್ಬಯ್ಯನವರಿಗೂ ಅದೇ ಬೇಕಾಗಿತ್ತು; ಅವರಿಗೆ ಬಹಳ ಸಂತೋಷವಾಯಿತು.

"ಜಯಲಕ್ಷ್ಮಿ! ಹೆಸರು ಚೆನ್ನಾಗಿದೆ! ತನಗೆ ಜಯವನ್ನು ತರಬಹುದು!" ಎಂದು ನಾರಾಯಣಮೂರ್ತಿ ಮನಸ್ಸಿನಲ್ಲೇ ಮಂಡಿಗೆ ಮುರಿಯತೊಡಗಿದ.

ಮಾರನೆಯ ದಿನವೇ ಅವನೊಬ್ಬನೇ ಹೆಣ್ಣು ನೋಡುವುದಕ್ಕಾಗಿ ಸುಬ್ಬಯ್ಯನವರೊಡನೆ ಅತ್ತಿಗುಪ್ಪೆಗೆ ಹೊರಟ.

೬

## ಲಗ್ನಪತ್ರಿಕೆ ಆಗಿಯೇಹೋಯಿತು

ಜೋಯಿಸರ ಮನೆಯಿಂದ ಹಿಂದಿರುಗುವಾಗಲೆ ನಾರಾಯಣಮೂರ್ತಿಯ ಒಪ್ಪಿಗೆ ಪಡೆದು, ಮಾರನೆಯ ದಿನ ತಾವು ವರನನ್ನು ಸಂಗಡ ಕರೆದುಕೊಂಡು ಬರುವುದಾಗಿಯೂ ಜಾತಕಾನುಕೂಲವಾಗಿದೆಯೆಂದೂ ಸುಬ್ಬಯ್ಯ ನಾಗಪ್ಪ ನವರಿಗೆ ಕಾಗದ ಬರೆದು, ಹತ್ತಿರದಲ್ಲಿ ಇದ್ದ ಅಂಚೆ ಕಚೇರಿಗೆ ಹೋಗಿ ಕಾಗದ ಹಾಕಿಬಿಟ್ಟಿದ್ದರು. ಕಾಗದ ನಾಗಪ್ಪನವರಿಗೆ ಸಕಾಲದಲ್ಲಿ ತಲಪಿತ್ತು. ಕಾಗದದ ನಿರೀಕ್ಷಣೆಯಿಲ್ಲದೆಯೇ, ಹಿರೋಡೆಗೆ ತಮ್ಮ ಜೋಡೆತ್ತಿನ ಗಾಡಿಯನ್ನು ಕಳಿಸಿ ಬಿಟ್ಟಿದ್ದರು. ಕಾಗದ ಬಂದಮೇಲೆ, ಅವರು ತಮ್ಮ ಭಾವಿ ಅಳಿಯನನ್ನು ಎದುರುಗೊಳ್ಳುವುದಕ್ಕಾಗಿ ಎಲ್ಲ ಏರ್ಪಾಡುಗಳನ್ನೂ ಮಾಡಿದ್ದರು. ಬಂದ ಕೂಡಲೆ ಕೊಡುವುದಕ್ಕಾಗಿ ಬಿಸಿಬಿಸಿಯಾಗಿ ರವೆ ಉಪ್ಪಿಟ್ಟು ತಯಾರುಮಾಡಿ ಸಿದ್ದರು. ತಮ್ಮ ತೋಟದ ಕಡಕಡೆಯ ಮಾವಿನ ಹಣ್ಣುಗಳನ್ನೂ ರಸಬಾಳೆ ಹಣ್ಣನ್ನೂ ತರಿಸಿಟ್ಟಿದ್ದರು. ವರ ಮದುವೆಗೆ ಒಪ್ಪಿದರೆ ಆ ದಿನವೇ ಲಗ್ನ ಪತ್ರಿಕೆಯೂ ಆಗಿಬಿಡಬೇಕೆಂದು ಅವರು ನಿಶ್ಚಯಿಸಿದ್ದರಿಂದ ಅದಕ್ಕೆ ಬೇಕಾದ ಎಲ್ಲ ಏರ್ಪಾಡುಗಳನ್ನೂ ಮಾಡಿದ್ದರು. ರಾತ್ರಿ ಔತಣದ ಅಡಿಗೆಗೆ ಹೇಳಿದ್ದರು. ಈ ಎಲ್ಲ ಸಂಗತಿಗಳನ್ನೂ ತನ್ನ ತಮ್ಮ ಸೂರಪ್ಪನಿಗೂ ತಿಳಿಸಿ, ಅವನ ಮನೆಯವ ರೆಲ್ಲರೂ ಆ ಹೊತ್ತಿಗೆ ತಮ್ಮ ಮನೆಯಲ್ಲೆ ಓಡಾಡಬೇಕೆಂದೂ, ಎಲ್ಲರೂ ರಾತ್ರಿ ಅಲ್ಲಿಗೆ ಊಟಕ್ಕೆ ಬರಬೇಕೆಂದೂ ಕೋರಿದ್ದರು.

ಸುಬ್ಬಯ್ಯ ನಾರಾಯಣಮೂರ್ತಿಯೊಡನೆ ಅತ್ತಿಗುಪ್ಪೆ ತಲಪುವ ಹೊತಿಗೆ ನಾಲ್ಕು ನಾಲ್ಕೂವರೆಗಂಟೆ ಮಾತ್ರ ಆಗಿತ್ತು, ಅಷ್ಟೆ. ಅವರು ನೆಟ್ಟಗೆ ನಾಗಪ್ಪನವರ ಮನೆಗೇ ಹೊರಟರು. ನಾಗಪ್ಪನವರು ಇವರಿಬ್ಬರನ್ನೂ ಎದುರು ನೋಡುತ್ತ ಬಾಗಿಲಿನಲ್ಲೆ ನಿಂತಿದ್ದರು.

ಇವರಿಬ್ಬರೂ ಬಾಗಿಲ ಹತ್ತಿರಕ್ಕೆ ಹೋದೊಡನೆಯೇ "ದಯಮಾಡಿಸ ಬೇಕು ಒಳಕ್ಕೆ" ಎಂದು ನಾಗಪ್ಪನವರು ನಗುನಗುತ್ತ ನುಡಿದರು. ಅಮಾ ವಾಸ್ಯೆಯ ರಾತ್ರಿಯ ಆಕಾಶದಲ್ಲಿ ನಕ್ಷತ್ರಗಳು ಮಿನುಗುಟ್ಟುವಂತೆ ಅವರ ಮುಖ ಪ್ರದೇಶದಲ್ಲಿ ಹಲ್ಲುಗಳು ಫಳಫಸಿದುವು ಅವರು ನಕ್ಕಾಗ.

ಮೊದಲು ಉಪಾಹಾರ ಆಯಿತು. ಆಮೇಲೆ ಸುಬ್ಬಯ್ಯ, ನಾಗಪ್ಪ, ಸೂರಪ್ಪ—ಇವರುಗಳು ತುಸಹೊತ್ತು ಲೋಕಾಭಿರಾಮವಾಗಿ ಹರಟೆ ಹೊಡೆಯುತ್ತಿದ್ದರು. ಮಧ್ಯೇ ಮಧ್ಯೇ ನಾಗಪ್ಪನವರು ನಾರಾಯಣಮೂರ್ತಿಗೆ ಪ್ರಶ್ನೆ ಹಾಕುತ್ತಿದ್ದರು ; ಅವನು ಹೆಚ್ಚು ಮಾತಾಡದೆ, 'ಉಂಟು – ಇಲ್ಲ' ಇಷ್ಟೆ ಉತ್ತರ ಹೇಳುತ್ತಿದ್ದ. 'ಬಡವನಾದರೂ ಬಿಂಕವಿದೆ' ಎಂದುಕೊಂಡರು ನಾಗಪ್ಪನವರು ತಮ್ಮ ಮನಸ್ಸಿನಲ್ಲಿ. ನಾಗಪ್ಪನವರ ಹೆಂಡತಿ ನಂಜಮ್ಮ ತಾವೇ ಉಪ್ಪಿಟ್ಟು ತಂದಿಟ್ಟು, ಆ ನೆವದಲ್ಲಿ ತಮ್ಮ ಆಗಲಿರುವ ಅಳಿಯಂದಿರನ್ನು ಮನಃಪೂರ್ತಿ ನೋಡಿ ಹಿಗ್ಗಿದ್ದರು ; ನಿಂಬೆಹಣ್ಣಿನ ಪಾನಕ ಕೊಡುವುದಕ್ಕಾಗಿ ಯಜಮಾನರನ್ನು ಅಡಿಗೆ ಕೋಣೆಯೊಳಕ್ಕೆ ಕರೆದು, "ಗಂಡು ಬಹಳ ಲಕ್ಷಣವಾಗಿದಾನೆ ಅಂದರೆ. ಹೇಗಾದರೂ ಮಾಡಿ ಒಪ್ಪಿಸಿಬಿಡಿ ಅಂತ ಸುಬ್ಬಯ್ಯನವರನ್ನ ಸ್ವಲ್ಪ ಬಲವಂತಮಾಡಿ ಅಂದರೆ. ಹುಡುಗನ ತಂದೆಯಿಂದ ಕೊಂಡುಕೊಂಡ ಹತ್ತು ಎಕರೆ ಜಮೀನನ್ನು ಅವನಿಗೇ ಕೊಟ್ಟುಬಿಡೋಣ. ಹಾಗಂತ ನೀವು ಮಾತುಕೊಟ್ಟರೆ ಖಂಡಿತ ಒಪ್ಪಿಕೊಳ್ಳುತ್ತಾನೆ. ಬಡಹುಡುಗ, ಅವನೂ ಬದುಕಿಕೊಳ್ಳುತ್ತಾನೆ. ನಮ್ಮ ಹುಡುಗೀನೂ ಸುಖವಾಗಿರುತ್ತೆ" ಎಂದು ನಂಜಮ್ಮ ಮೆಲ್ಲನೆ ಉಸುರಿದರು.

"ಅವನು ಒಪ್ಪುವುದೇ ನನಗೆ ಸಂದೇಹವಾಗಿದೆ. ನೋಡಿದರೆ ತುಂಬ ಬಿಂಕದ ಹುಡುಗ ಅನ್ನುವಹಾಗೆ ಕಾಣುತ್ತಾನೆ. ನೋಡೋಣ ದೇವರಿದಾನೆ. ಹುಡುಗಿಯ ಪುಣ್ಯ. ಈ ಹುಡುಗ ಒಪ್ಪದೆ ಹೋದರೆ ನಾನು ಇನ್ನು ಗಂಡುಗಳನ್ನು ನೋಡುವ ಹವ್ಯಾಸಕ್ಕೇ ಹೋಗುವುದಿಲ್ಲ. ನನಗೂ ಬೇಜಾರಾಗಿ ಹೋಗಿದೆ. . .ಇನ್ನು ಜಮೀನಿನ ವಿಚಾರ. ಸದ್ಯ ನೀನು ಎಲ್ಲಾದರೂ ಈ ವಿಚಾರ ಸೂರಪ್ಪನಿಗೆ ಕೇಳುವ ಹಾಗೆ ಪ್ರಸ್ತಾಪ ಮಾಡಿಬಿಟ್ಟೀಯೆ. ಕೊಡಬೇಕೂ ಅಂತ ನಾನೂ ಮನಸ್ಸಿನಲ್ಲಿ ಮಾಡಿಕೊಂಡಿದ್ದೇನೆ. ಅದರ ವಿಚಾರ ಹುಡುಗನ ಲಗುಬಿಗು ನೋಡಿಕೊಂಡು, ಸೂರಪ್ಪ ಇಲ್ಲದೆ ಇರುವ ಹೊತ್ತಿನಲ್ಲಿ, ಎತ್ತಬೇಕು. ಎಲ್ಲಿ ಪಾನಕ ಕೊಡು, ಕಾದಿದಾರೇನೊ."

ಮಗಳು ಜಯಲಕ್ಷ್ಮಿಯೇ ತಂದೆ ತಾಯಿಗಳ ಸಂಭಾಷಣೆಯನ್ನು ಆಲಿಸುತ್ತ, ಪಾನಕಕ್ಕೆ ಹಾಕಲು ಯಾಲಕ್ಕಿಯನ್ನು ಪುಡಿ ಮಾಡುತ್ತಿದ್ದಳು. 'ಪಾನಕ ಕೊಡು' ಎಂದು ಕೇಳಿದಕೂಡಲೆ ಯಾಲಕ್ಕಿ ಪುಡಿಯನ್ನು ಪಾನಕಕ್ಕೆ ಬೆರಸಿ,

ಪಾನಕವನ್ನು ಬಗ್ಗಿಸಿಕೊಡುವುದಕ್ಕೆ ತಾಯಿ ತೊಳೆದು ತಂದಿಟ್ಟಿದ್ದ ಕಂಚಿನ ಲೋಟಗಳನ್ನು ಕೈಗೆ ತೆಗೆದುಕೊಂಡಳು. ಕೂಡಲೆ ಅವುಗಳನ್ನು ಕೆಳಕ್ಕಿರಿಸಿದಳು. "ಅಮ್ಮ, ಒಂದಾದರೂ ಬೆಳ್ಳಿಯ ಪಂಚಪಾತ್ರೆ ತೆಗೆದುಕೊಡಮ್ಮ" ಎಂದು ತಾಯಿಯನ್ನು ಕೇಳಿದಳು. ನಂಜಮ್ಮ ಬೇರೆಯ ಕೋಣೆಗೆ ಹೋಗಿ ತೆಗೆಯಲಾರದ ಮನಸ್ಸಿನಿಂದ ಎರಡು ಬೆಳ್ಳಿಯ ಪಾತ್ರೆಗಳನ್ನು ತೆಗೆದು ತಂದು ಮಗಳ ಮುಂದಿಟ್ಟಳು. ಜಯಲಕ್ಷ್ಮಿ ಅವೆರಡಕ್ಕೂ ಪಾನಕ ಬಗ್ಗಿಸಿದಳು.

"ಜಯ, ನೀನೇ ಪಾನಕ ತಂದುಕೊಟ್ಟುಬಿಡಮ್ಮ. ಹಾಗೇ . . . ಗಂಡನ್ನ ನೋಡಿದ ಹಾಗೂ ಆಗುತ್ತೆ" ಎಂದರು ನಾಗಪ್ಪನವರು.

"ನೋಡಿದಿರ! ಸುಮ್ಮನಿರಬಾರದೆ ನೀವು. ಎಷ್ಟು ಹೇಳಿದರೂ . . . ಸಂಜೆಯಾಗಲಿ. ಸೂರಪ್ಪನ ಮಗಳು ಇನ್ನೂ ಬಂದಿಲ್ಲ. ಒಂದಿಷ್ಟು ಜಡೆ ಗಿಡೆ ಹಾಕಿ ಒಳ್ಳೆ ಸೀರೆ ಉಡಿಸಬೇಕೋ ಬೇಡವೊ?" ಎಂದು ಗಂಡನನ್ನು ಎಚ್ಚರಿಸಿದರು ನಂಜಮ್ಮ.

"ಹೌದು, ಹೌದು, ಮರೆತಿದ್ದೆ. ಇವೊತ್ತು ಸಂಜೆ ೬ ರವರೆಗೂ ರಾಹುಕಾಲ ಬೇರೆ ಇದೆ. ಸರಿ" ಎಂದು ನಾಗಪ್ಪನವರು ತಾವೇ ಪಾನಕ ತೆಗೆದುಕೊಂಡುಹೋಗಿ ಕೊಟ್ಟರು.

ನಾರಾಯಣಮೂರ್ತಿ ರವೆ ಉಪ್ಪಿಟ್ಟು, ನಿಂಬೆ ಪಾನಕ ಮುಂತಾದ್ದನ್ನು ಕಂಡವನೇ ಅಲ್ಲ. ಎರಡು ಹೊತ್ತು ಅನ್ನ ಕಂಡರೆ ಸಾಕಾಗಿತ್ತು. ವೆಂಕಮ್ಮ ಎಂದಾದರೂ ಒಂದೊಂದು ದಿನ ರಾತ್ರೆ ವೇಳೆ ತಮ್ಮ 'ಫಲಾರ'ಕ್ಕೆಂದು ಜಿಡ್ಡು ಕಾಣದ ಅಕ್ಕಿ ಹಿಟ್ಟಿನ ರೊಟ್ಟಿಯನ್ನೊ ಅಕ್ಕಿ ತರಿಯ ಉಪ್ಪಿಟ್ಟನ್ನೊ ಮಾಡಿಕೊಳ್ಳುತ್ತಿದ್ದರು. ಅಲ್ಪ ಸ್ವಲ್ಪ ಮಿಕ್ಕರೆ ಮಕ್ಕಳಿಗೆಂದು ಮುಚ್ಚಿಟ್ಟಿದ್ದು ಬೆಳಗ್ಗೆ ಮಕ್ಕಳಿಗೆ ಕೊಡುತ್ತಿದ್ದರು. ಹೀಗೆ, ನಾರಾಯಣಮೂರ್ತಿಗೆ ತಂಗಳು ಅಕ್ಕಿ ಉಪ್ಪಿಟ್ಟಿನ ಪರಿಚಯ ಇತ್ತು ಎಂದು ಮಾತ್ರ ಹೇಳಬಹುದು. ರಾಮನವಮಿಯಲ್ಲಿ 'ಮನೆಯವರು' ಪಾನಕಪೂಜೆಗೇನೋ ಹೇಳುತ್ತಿದ್ದರು. ಆದರೆ ಆಗ ಕೊಡುತ್ತಿದ್ದುದು ಬೆಲ್ಲ ಕದಡಿದ ಬೇಲದ ಪಾನಕ. ತಿಳಿಯಾದ ನಿಂಬೆ ಪಾನಕದ ರುಚಿ ಅವನ ನಾಲಗೆ ಕಂಡಿರಲಿಲ್ಲ.

ನಾರಾಯಣಮೂರ್ತಿ ಪಾನಕವನ್ನು ಸವಿದು ಸವಿದು ನಿಧಾನವಾಗಿ ಕುಡಿಯುತ್ತಿದ್ದ. ನಾರಾಯಣಮೂರ್ತಿ ಅದನ್ನು ಮೆಚ್ಚಿದ್ದಾನೆಂದು ಅವನ

ಮುಖಭಾವದಿಂದಲೆ ಅರಿತು—"ಉಪ್ಪಿಟ್ಟು ಪಾನಕ ನಮ್ಮ ಹುಡುಗಿಯೇ ಮಾಡಿದ್ದು" ಎಂದು ಒಂದು ಮಾತು ಹಾಕಿದರು. ಅವು ನಿಜವಾಗಿಯೂ ಚೆನ್ನಾಗಿದ್ದುವು. ಆದರೆ ನಾರಾಯಣಮೂರ್ತಿಯ ಮನಸ್ಸು ಪಾನಕ ಉಪ್ಪಿಟ್ಟುಗಳ ಮೇಲೆ ಇರಲಿಲ್ಲ. ಹುಡುಗಿಯ ಮೇಲೆ ಇತ್ತು. ಅಷ್ಟು ಚೆನ್ನಾಗಿದ್ದ ಪಾನಕ ಉಪ್ಪಿಟ್ಟನ್ನು ಹುಡುಗಿಯೇ ಮಾಡಿದ್ದಾಳೆಂದು ಕೇಳಿದ ಮೇಲಂತೂ, ಅವಳನ್ನು ನೋಡಬೇಕೆಂಬ ಆತುರ ಅವನಿಗೆ ಹೆಚ್ಚಾಯಿತು. ಆದರೆ ಆತುರವನ್ನು ತೋರ್ಪಡಿಸದೆ ಗಂಭೀರವಾಗಿಯೇ ಕುಳಿತಿದ್ದ. "ಹೌದು, ಉಪ್ಪಿಟ್ಟು ಪಾನಕ ಬಹಳ ಚೆನ್ನಾಗಿದೆ" ಎಂದು ಅವನ ಮನಸ್ಸು ನುಡಿಯಿತು. ಆದರೆ ಬಾಯಿ ಮನಸ್ಸಿನ ಮಾತನ್ನು ಹೊರಕ್ಕೆ ಹಾಕಲಿಲ್ಲ. ಸುಬ್ಬಯ್ಯನೇನೊ "ಪಾನಕ ಬಹಳ ಚೆನ್ನಾಗಿದೆ" ಎಂದು ಹೇಳಿ ಹೇಳಿ ಮೂರು ನಾಲ್ಕು ಲೋಟ ಹಾಕಿಸಿಕೊಂಡು ಕುಡಿದರು.

"ನಮ್ಮ ಜಯನಿಗೆ ಅಡಿಗೆ ಕೆಲಸ ಎಲ್ಲ ಚೆನ್ನಾಗಿ ಬರುತ್ತದೆ. ಎಲ್ಲ ಅವಳೇ ಕಲಿಸಿಕೊಟ್ಟದ್ದು. ಹುಡಿಗಡುಬು ಮಾಡುವುದು ಬಹಳ ಕಷ್ಟ. ಅಂಥಾದ್ದರಲ್ಲಿ, ಅದರಲ್ಲಿ ತಾಯಿಯನ್ನೇ ಮೀರಿಸಿಬಿಟ್ಟಿದ್ದಾಳೆ" ಎಂದು ಮತ್ತೊಂದು ಮಾತು ಹಾಕಿದರು ನಾಗಪ್ಪನವರು.

ಎಲ್ಲರೂ ಎಲೆ ಅಡಕೆ ಹಾಕಿಕೊಂಡಾದಮೇಲೆ, "ಆರು ಗಂಟೆ ತನಕ ರಾಹುಕಾಲವಿದೆ. ಅಷ್ಟರಲ್ಲಿ ದೇವಸ್ಥಾನಕ್ಕೆ ಹೋಗಿ ಬಂದುಬಿಡೋಣ. ಈ ದಿನದ ಲಗ್ನ ನಿಶ್ಚಯವನ್ನು ಆ ಮಹಾನುಭಾವನೇ ಮಾಡತಕ್ಕವನಾದ್ದರಿಂದ, ಶುಭಕಾರ್ಯಕ್ಕೆ ಮುಂಚೆ ದೇವರ ದರ್ಶನ ಮಾಡಬೇಕು. ಹೌದೋ ಅಲ್ಲವೋ ?" ಎಂದು ನಾಗಪ್ಪನವರು ಸುಬ್ಬಯ್ಯನ ಕಡೆ ನೋಡಿದರು.

"ಅಗತ್ಯವಾಗಿ" ಎಂದು ಸುಬ್ಬಯ್ಯ ಮೇಲಕ್ಕೆದ್ದರು. ನಾಗಪ್ಪ ಒಳಕ್ಕೆ ಹೋಗಿ ಹಣ್ಣು ಕಾಯಿ ತೆಗೆದುಕೊಂಡು ಬಂದರು. ಅವರು ಮೂವರೂ ದೇವಸ್ಥಾನಕ್ಕೆ ಹೋದರು ; ಮೂರು ಮಂದಿ ಆಗುತ್ತದೆಂದು ಜೊತೆಗೆ ಒಬ್ಬ ಹುಡುಗನನ್ನು ಕರೆದುಕೊಂಡು ಹೋಗಿದ್ದರು.

ಅವರು ದೇವಸ್ಥಾನದಿಂದ ಬರುವ ಹೊತ್ತಿಗೆ ಚೆನ್ನಾಗಿ ಕತ್ತಲೆಯಾಗಿತ್ತು. ಹಜಾರದಲ್ಲಿ ಜಮಖಾನ ಹಾಸಿ ಎಲ್ಲ ಅಣಿಯಾಗಿತ್ತು. ಮೇಲುಗಡೆ ಹಜಾರದಲ್ಲಿ ಯಾರೂ ಕುಳಿತಿರಲಿಲ್ಲ ; ಅದು ಹೆಂಗಸರಿಗಾಗಿ ಮೀಸಲಾಗಿತ್ತು.

ಕೆಳಗಡೆ ಹಜಾರದ ಒಂದು ಕೊನೆಯಲ್ಲಿ ಸೂರಪ್ಪ, ಜೋಯಿಸರು, ತಾಲ್ಲೂಕು ಕಚೇರಿಯ ಶಿರಸ್ತೇದಾರರು, ಹೆಡ್ ಗುಮಾಸ್ತರು, ಹೆಡ್ ಮೇಷ್ಟ್ರರು, ಪೋಸ್ಟ್ ಮೇಷ್ಟ್ರರು ಮುಂತಾದ ಊರಿನ ಮುಖಂಡರೆಲ್ಲ ಬಂದು ನೆರೆದಿದ್ದರು. 'ಈ ದಿನ ಲಗ್ನಪತ್ರಿಕೆಯೂ ಆಗಿಯೇ ಹೋಗುತ್ತದೆ' ಎಂಬ ದೀಡಿನ ಮೇಲೆಯೇ ನಾಗಪ್ಪನವರು ಇವರನ್ನೆಲ್ಲ ಸಭೆಗೂ ಮತ್ತು ಊಟಕ್ಕೂ ಆಹ್ವಾನಿಸಿದ್ದರು. ಎಲ್ಲರೂ ಊಟಕ್ಕೆ 'ಸಿದ್ಧವಾಗಿಯೇ' ಬಂದಿದ್ದರು.

ನಾಗಪ್ಪ, ಸುಬ್ಬಯ್ಯ, ನಾರಾಯಣಮೂರ್ತಿ– ಇವರು ಒಳಕ್ಕೆ ಬಂದ ಕೂಡಲೆ, "ಅಳಿಯಂದಿರು ಇಲ್ಲೇ ದಯಮಾಡಿಸಬಹುದಲ್ಲ" ಎಂದು ಅಲ್ಲಿಯೇ ಹಾಕಿದ್ದ ಒಂದು ಒರಗುದಿಂಬನ್ನು ತೋರಿಸಿದರು ಜೋಯಿಸರು. ದಿಂಬಿನ ಪಕ್ಕದಲ್ಲೇ ಮುದುಕರಲ್ಲದಿದ್ದರೂ ಮುದುಕರಂತೆ ಕಾಣುತ್ತಿದ್ದ ಹೆಡ್ ಗುಮಾಸ್ತೆ ಹಿರಿಯಣ್ಣಯ್ಯನವರು ಕುಳಿತಿದ್ದರು. ನಾರಾಯಣಮೂರ್ತಿ ಅವರನ್ನು ನೋಡಿ– "ತಾವು ಹಿರಿಯರು, ವಯಸ್ಸಾದವರು. ತಾವು ಇಲ್ಲಿ ಕೂಡಿ. ನಾನು ನಿಮ್ಮ ಸ್ಥಳದಲ್ಲಿ ಕೂಡುತ್ತೇನೆ" ಎಂದ. ಹಿರಿಯಣ್ಣಯ್ಯನವರು– "ನೀನು ಪುಣ್ಯವಂತ ನಾಗಪ್ಪ. ಎಂಥ ವಿನಯಸಂಪನ್ನನಾದ ಅಳಿಯನನ್ನ ಸಂಪಾದಿಸಿಕೊಂಡಿದ್ದಿ! ಭೇಷ್. ಪಟ್ಟಣದ ಹುಡುಗರು ಇಷ್ಟು ವಿನಯ ವಂತರಾಗಿರುವುದು ತೀರ ವಿರಳ. ಅಯ್ಯ, ನಿನ್ನ ಹೆಸರೇನು? (ನಾರಾಯಣ ಮೂರ್ತಿ ಎಂಬುದಾಗಿ ಸುಬ್ಬಯ್ಯ ತಿಳಿಸಿದರು.) ನಾರಾಯಣಮೂರ್ತಿ, ಇಪೊತ್ತು ನಮ್ಮೆಲ್ಲರಿಗಿಂತ ನೀನು ಮುಖ್ಯನಾದವನು; ನೀನೇ ಹಿರಿಯ ವ್ಯಕ್ತಿ. ಬಾರಯ್ಯ ಕುಳಿತುಕೊ" ಎಂದು ಕೈಹಿಡಿದು ಕೂರಿಸಿಕೊಂಡರು. ಯತ್ನ ವಿಲ್ಲವೆ, ಇನ್ನು ಹೆಚ್ಚು ಉಪಚಾರ ಹೇಳಿಸಿಕೊಳ್ಳಬಾರದೆಂದು, ನಾರಾಯಣ ಮೂರ್ತಿ ಕುಳಿತ.

ನಾಗಪ್ಪನವರು ಒಳಕ್ಕೆ ಹೋದರು. ಮತ್ತೆ ಹೊರಕ್ಕೆ ಬಂದರು. "ಒಂದು ಗ್ಯಾಸ್‌ಲೈಟ್ ದೀಪಕ್ಕೆ ಹೇಳಿದ್ದೆ. ಇಷ್ಟು ಹೊತ್ತಾದರೂ ಬರಲೇ ಇಲ್ಲ. ನಮ್ಮವರು ಏನು ತಡ ಮಾಡುತ್ತಾರೊ. ಇದಕ್ಕೇ ಪಟ್ಟಣದವರು ನಮ್ಮಂಥ ಹಳ್ಳಿಯವರು ಅಂತ ಹಾಸ್ಯ ಮಾಡುವುದು. ನಾನು ಬಹಳ ಬಲವಂತ ಮಾಡಿದ ಮೇಲೆ ಶೆಟ್ಟರು ಮೈಸೂರಿನಿಂದ ಒಂದು ಗ್ಯಾಸ್‌ಲೈಟ್ ತರಿಸಿದರು ಈಚೆಗೆ. ಊರಿಗೆಲ್ಲ ಇರುವುದು ಒಂದೇ. ಇನ್ನು ಯಾರು

ತರಿಸಿಕೊಂಡಿದ್ದಾರೋ. ಅದನ್ನು ಹೊತ್ತಿಸುವುದಕ್ಕೂ ಯಾರಿಗೂ ಬರುವುದಿಲ್ಲ" ಎಂದು ಎಲ್ಲರಿಗೂ ಕೇಳುವಂತೆ ಗೊಣಗಿದರು. ಹೆಡ್ ಗುಮಾಸ್ತೆ ಹಿರಿಯಣ್ಣಯ್ಯ ಬಾಯಿಹಾಕಿದರು: "ಹೆಣ್ಣು ನೋಡಬೇಕಾದವರು ನಾವಲ್ಲ, ನಾರಾಯಣಮೂರ್ತಿ. ನಮ್ಮ ಮುದಿಗಣ್ಣುಗಳಿಗಾದರೆ ಗ್ಯಾಸ್‌ಲೈಟು ಪಾಸ್‌ಲೈಟು ಬೇಕು. ಅವನ ಎಳೆಯ ಕಣ್ಣಿಗೆ ಈ ಹ್ಯಾಂಗಿಂಗ್ ಲ್ಯಾಂಪೇ ಸಾಕು."

ಹೌದು ಎಂದು ಹೂಗುಟ್ಟಿ ತಲೆಯಲ್ಲಾಡಿಸುವಂತೆ, ಹಜಾರದ ಮಧ್ಯದಲ್ಲಿ ತೂಗಹಾಕಿದ್ದ, ಸಣ್ಣದಾಗಿ ಮಿಣಮಿಣನೆ ಉರಿಯುತ್ತಿದ್ದ ತೂಗುದೀಪ ಆಗತಾನೆ ನುಗ್ಗಿ ಬೀಸಿದ ಗಾಳಿಗೆ ಅಲುಗಿ ತೂಗಾಡಿತು. ನಾಗಪ್ಪನವರು ದೀಪವನ್ನು ಸ್ವಲ್ಪ ದೊಡ್ಡದು ಮಾಡಿದರು. ದೀಪ ಹೊಗೆ ಸುತ್ತಿಕೊಂಡು, ಅದರ ಪ್ರಕಾಶ ಇನ್ನೂ ಸ್ವಲ್ಪ ಕಡಮೆಯಾಯಿತು.

ನಾರಾಯಣಮೂರ್ತಿಗೂ ಹೆಣ್ಣು ನೋಡಲು ಈ ಬೆಳಕು ಸಾಲದು ಎಂದೆನಿಸಿತು. ಆದರೆ ಇನ್ನೊಂದು ದೀಪ ಹೊತ್ತಿಸಿ, ಇಲ್ಲವೆ ಬೇಗನೆ ಗ್ಯಾಸ್ ಲೈಟ್ ತರಿಸಿ ಎಂದು ಹೇಗೆ ಕೇಳುವುದು? ಅಲ್ಲದೆ ಹಿರಿಯಣ್ಣಯ್ಯನವರು ಬೇರೆ, ಎಳೆಯ ಕಣ್ಣು ಎಂದು ಹೊಗಳಿದ್ದರು. ಜೊತೆಗೆ,–"ನನ್ನ ಭಾಗ್ಯಲಕ್ಷ್ಮಿ ಈಗ ನಡೆದು ಬರುತ್ತಾಳೆ. ಅವಳು ಸುಳಿದ ಕಡೆ ಬೆಳಕಿಗೆ ಕೊರತೆಯೆ?" ಎಂಬ ಅಸ್ಪಷ್ಟವಾದ ಭಾವನೆ ಬೇರೆ ಒಂದು ಅವನ ಮನಸ್ಸಿನಲ್ಲಿ ಸುಳಿದಾಡುತ್ತಿತ್ತು. ಆದ್ದರಿಂದ ಅವನು ಸುಮ್ಮನೆ ಇದ್ದ. ಆದರೆ ಮಾತ್ರ, ಹುಡುಗಿಯ ಬರವಿಗಾಗಿ ಮನಸ್ಸಿನಲ್ಲೆ ತವಕಪಡುತ್ತಿದ್ದ.

ಕೊನೆಗೆ ನಾಗಪ್ಪನವರು ಹುಡುಗಿಯನ್ನು ಕರೆದುಕೊಂಡು ಬರುವಂತೆ ತಮ್ಮ ಹೆಂಡತಿಗೆ ಹೇಳಿ, ನಾರಾಯಣಮೂರ್ತಿಯ ಹತ್ತಿರ ಬಂದು ಕುಳಿತರು.

ಈ ಹೊತ್ತಿಗಾಗಲೆ ನೆರೆಹೊರೆಯ ಹೆಂಗಸರು ಹುಡುಗರು ಎಂಟು ಹತ್ತು ಜನ ಮೇಲಿನ ಹಜಾರದಲ್ಲಿ ನೆರೆದಿದ್ದರು. ಕೋಣೆಯೊಳಗಿನಿಂದ ನಂಜಮ್ಮ, ಸೂರಪ್ಪನ ಹೆಂಡತಿ ಕಮಲಮ್ಮ, ವಧು ಜಯಲಕ್ಷ್ಮಿ ಮತ್ತು ಕಮಲಮ್ಮನ ಮಗಳು ಶಾರದೆ–ಇಷ್ಟು ಜನ ಬಂದರು. ಇಬ್ಬರು ಹೆಣ್ಣುಮಕ್ಕಳೂ ಕೋಣೆಯ ಪಕ್ಕದ ಮೂಲೆಯಲ್ಲೆ ಕುಳಿತುಬಿಟ್ಟರು. ತಾಯಂದಿರು ಸ್ವಲ್ಪ ಇತ್ತ ಕುಳಿತರು.

"ಒಂದು ಹಾಡು ಹೇಳಮ್ಮ ಜಯು" ಎಂದು ತಾವು ಕುಳಿತೆಡೆಯಿಂದಲೇ ನಾಗಪ್ಪನವರು ಸೂಚನೆ ಕೊಟ್ಟರು.

ಇಬ್ಬರು ಹೆಣ್ಣುಮಕ್ಕಳೂ ಒಟ್ಟಿಗೆ ಹಾಡಲು ಮೊದಲುಮಾಡಿದರು.

"ಜಯನಿಗೆ ನಾಚಿಕೆ ಒಬ್ಬಳೇ ಹೇಳುವುದಕ್ಕೆ. ಆದ್ದರಿಂದ ನನ್ನ ತಮ್ಮನ ಮಗಳೂ ಜೊತೆಯಲ್ಲಿ ಹೇಳುತ್ತಿದ್ದಾಳೆ. ಶಾರದೆಯ ಧ್ವನಿ ಸ್ವಲ್ಪ ಎತ್ತರ, ಅಂದರೆ ಕೀರಲು, ಗೊತ್ತಾಗುತ್ತೆ ನೋಡಿ" ಎಂದು ನಾಗಪ್ಪನವರು ವ್ಯಾಖ್ಯಾನ ಮಾಡಿದರು. ನಾಗಪ್ಪನವರ ಪುಣ್ಯಕ್ಕೆ ಸೂರಪ್ಪ ದೂರದಲ್ಲಿ ಕುಳಿತಿದ್ದ.

ಹೌದು, ನಾಗಪ್ಪನವರು ಹೇಳಿದಂತೆ ಒಂದು ಧ್ವನಿ ಕೊಂಚ ಎತ್ತರವಾಗಿತ್ತು; ಆದರೆ ಕೀರಲೇನೂ ಆಗಿರಲಿಲ್ಲ. ಆ ಎತ್ತರದ ಧ್ವನಿ ಹಿಂದುಗಡೆ ಕುಳಿತಿದ್ದ ಹುಡುಗಿಯಿಂದ ಹೊರಟು ಬರುತ್ತಿದ್ದಂತೆ ನಾರಾಯಣಮೂರ್ತಿಗೆ ತೋರಿತು. ಆದ್ದರಿಂದ, ಮುಂದುಗಡೆ ಕುಳಿತಿರುವ ಹುಡುಗಿಯೇ 'ತನ್ನ ಜಯಲಕ್ಷ್ಮಿ' ಎಂದು ತರ್ಕಿಸಿದ.

ಒಂದಾಯಿತು; ಎರಡಾಯಿತು; ಮೂರನೆಯ ಹಾಡು ಸಾಗುತ್ತಿತ್ತು. ಹಾಡು ಕೇಳಿ, 'ತನ್ನ ಹುಡುಗಿ' ಎತ್ತರದ ಧ್ವನಿ ಇಲ್ಲದಿದ್ದರೂ ಚೆನ್ನಾಗಿ ಹಾಡುವಹಾಗೆ ಕಾಣುತ್ತೆ, ಪರವಾಇಲ್ಲ ಎಂದು ಸಮಾಧಾನಪಟ್ಟುಕೊಂಡ ನಾರಾಯಣಮೂರ್ತಿ.

ಆದರೆ, ಇಬ್ಬರಲ್ಲಿ ಜಯಲಕ್ಷ್ಮಿ ಯಾರು ಎಂದು ನಾರಾಯಣಮೂರ್ತಿಯ ಮನಸ್ಸು ಮತ್ತೆ ತರ್ಕಿಸತೊಡಗಿತು. ಒಂದೊಂದು ಸಲ ಮುಂದುಗಡೆ ಕುಳಿತಿದ್ದ ಹುಡುಗಿಯ ಧ್ವನಿಯೂ ಎತ್ತರದಲ್ಲೇ ಇರುವಂತೆ ಅವನಿಗೆ ತೋರಹತ್ತಿತು.

ಅವನ ಮನಸ್ಸು ಹೀಗೆ ಮಧುವನ್ನು ಅರಸುತ್ತ ಆ ಹೂವಿನಿಂದ ಈ ಹೂವಿಗೆ, ಈ ಹೂವಿನಿಂದ ಆ ಹೂವಿಗೆ ಹಾರಾಡುತ್ತಿರುವ ದುಂಬಿಯಂತೆ ತೂಗಾಡುತ್ತಿರುವಾಗ, "ಈ ಕಡೆ ಕುಳಿತಿರುವವಳೇ ನನ್ನ ಮಗಳು ಜಯಲಕ್ಷ್ಮಿ. ಆ ಕಡೆ ಕುಳಿತಿರುವವಳು ನನ್ನ ತಮ್ಮನ ಮಗಳು ಶಾರದೆ" ಎಂದು ನಾಗಪ್ಪನವರು ಹೇಳಿದರು; ಅವರ ಈ ಮಾತುಗಳು ಮಂದಮಾರುತನಂತೆ ಬೀಸಿ ಬಂದು, ದುಂಬಿಯನ್ನು ಒಂದು ಹೂವಿನ ಮೇಲೆ ಸೆಳೆದೊಯ್ದು ಕೂರಿಸಿತು.

"ನನ್ನ ಮೊದಲ ತರ್ಕವೇ ಸರಿ. ಈ ಕಡೆಯುವಳೆಂದರೆ ಮುಂದುಗಡೆ ಕುಳಿತಿರುವ ಹುಡುಗಿಯೇ" ಎಂದು ಮುಂದುಗಡೆ ಕುಳಿತಿದ್ದ ಹುಡುಗಿಯನ್ನು ಕಣ್ಣು ತುಂಬ ನೋಡತೊಡಗಿದ.

ಮಿಣಿಮಿಣಿ ಎಂದು ಸಣ್ಣನಾಗಿ ಹೊಗೆಗಟ್ಟಿ ಉರಿಯುತ್ತಿದ್ದ ದೀಪದ ಬೆಳಕಿನಲ್ಲಿ ಹುಡುಗಿಯ ಮುಖಭಾವ ಅಂದವಾಗಿಯೇ ಕಂಡಿತು. ಮುಖದ ಮಾಟ ಅಷ್ಟು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಹುಡುಗಿಯ ಬಣ್ಣ ಸಾಮಾನ್ಯ ವಾಗಿ ಬಿಳುಪು ಎಂದು ಹೇಳುವ ಬಣ್ಣವಾಗಿಯೇ ಕಂಡಿತು. ಒಟ್ಟಿನ ಮೇಲೆ ಅವನು ನೋಡಿದ ಹುಡುಗಿ ಅವನ ಮನಸ್ಸಿಗೆ ಒಪ್ಪಿಬಂದಳು.

"ನನ್ನ ತಮ್ಮನ ಮಗಳೂ ಜಯನೂ ಸ್ವಲ್ಪ ಹೆಚ್ಚುಕಡಮೆ ಒಂದೇ ಮಾದರಿ ಅಂತ ಇಟ್ಟುಕೊಳ್ಳಿ" ಎಂದು ಮಾತು ಹಾಕಿದರು ನಾಗಪ್ಪನವರು.

ಹುಡುಗಿಯ ರೂಪ ಒಪ್ಪಿತು, ಕಂಠ ಒಪ್ಪಿತು. "ಆಯಾಸವಾಗುತ್ತೆ, ಹಾಡುವುದು ಸಾಕು" ಎಂದು ಸೂಚನೆ ಕೊಟ್ಟ ನಾರಾಯಣಮೂರ್ತಿ.

ಹಾಡಿಕೆ ನಿಂತಿತು; ಪಟಕ್ಕನೆ ಹೆಣ್ಣುಮಕ್ಕಳಿಬ್ಬರೂ ಒಳಕ್ಕೆ ಎದ್ದು ಹೋದರು. ನಾಗಪ್ಪನವರು ಮೆಲ್ಲನೆ ನಾರಾಯಣಮೂರ್ತಿಯ ಬಳಿಗೆ ಸರಿದು, ದೇಶಾವರಿ ನಗೆ ನಗುತ್ತ, ಅವನಿಗೆ ಮಾತ್ರ ಕಿವಿಯಲ್ಲಿ ಉಸುರುವಂತೆ ಆದರೂ ಎಲ್ಲರಿಗೂ ಕೇಳುವಷ್ಟುಮಟ್ಟಿಗೆ ಗಟ್ಟಿಯಾದ ದನಿಯಲ್ಲಿ–"ಹೆಣ್ಣು ಒಪ್ಪಿದ ಹಾಗಾಗಿದ್ದರೆ . . . ದೊಡ್ಡ ಮನಸ್ಸು ಮಾಡಿ ಒಪ್ಪಿಗೆ ಇದೆ ಅಂತ ಹೇಳಿ ಬಿಟ್ಟರೆ . . . ಹ ಹ್ಹ ಹ . . . ಲಗ್ನಪತ್ರಿಕೆಗೆ . . . ಏರ್ಪಾಡು . . . ಎಲ್ಲ . . . ಸಿದ್ಧವಾಗಿದೆ . . ." ಎಂದರು.

ನಾರಾಯಣಮೂರ್ತಿ ಮೌನವಾಗಿದ್ದ. ಹುಡುಗಿಯನ್ನು ತಾನು ಮನಸಾರ ಒಪ್ಪಿರುವುದು ಸರಿಯೆ. ಆ ಹುಡುಗಿ ತನ್ನ ಜೀವನದ ಗೆಳತಿ ಯಾಗಿರಲು ಯೋಗ್ಯಳಾಗಿಯೆ ಇದ್ದಾಳೆ. ಆದರೂ, ತನ್ನ ತಾಯಿಯ ಅಪ್ಪಣೆ ಪಡೆದು ಒಪ್ಪಿಗೆ ಕೊಡುವುದು ಮೇಲಲ್ಲವೆ?

"ಹುಡುಗಿಯನ್ನೇನೋ ಒಪ್ಪಿದ್ದೇನೆ. ಆದರೆ...." ಎಂದು ನಾರಾಯಣ ಮೂರ್ತಿ ಅನುಮಾನಿಸುತ್ತ ಹೇಳತೊಡಗಿದ.

"ನೀವು ಒಪ್ಪಿದ ಮೇಲೆ ನಿಮ್ಮ ತಾಯಿ ನಿಮ್ಮ ಮಾತಿಗೆ ಯಾಕೆ ವಿರುದ್ಧ ನಡೆಯುತ್ತಾರೆ? ನೀವು ಊರಿಗೆ ಹೋಗಿ ನಿಮ್ಮ ತಾಯಿಯನ್ನು

ಕೇಳಿ ಕಾಗದ ಬರೆದು ಮತ್ತೆ ಲಗ್ನಪತ್ರಿಕೆ ಆಗುವುದೆಂದರೆ ತಡವಾಗುತ್ತೆ. ಶ್ರಾವಣ ಬಹುಳ ಬಿದಿಗೆ ಲಗ್ನ ಪ್ರಶಸ್ತವಾಗಿದೆಯಂತೆ. ಇನ್ನು ಇಪ್ಪತ್ತು ದಿನ ಕೂಡ ಇಲ್ಲ. ನಾವು ಮದುವೆಗೆ ಇನ್ನೂ ಯಾವ ಏರ್ಪಾಡನ್ನೂ ಮಾಡಿಕೊಂಡಿಲ್ಲ. ನಿಮ್ಮ ತಾಯಿಗೆ ಬೇಕಾದರೆ ಸುಬ್ಬಯ್ಯ ಎಲ್ಲವನ್ನೂ ವಿವರಿಸಿ ಹೇಳುತ್ತಾರೆ" ಎಂದು ಸುಬ್ಬಯ್ಯನ ಮುಖ ನೋಡಿದರು ನಾಗಪ್ಪನವರು.

"ಆಗಲಪ್ಪ ನಾಣು. ಅಮ್ಮನಿಂದ ವಿರುದ್ಧ ಮಾತು ಬರದಂತೆ ನಾನು ನೋಡಿಕೊಳ್ಳುತ್ತೇನೆ. ಅಲ್ಲದೆ, ಈ ಸಂಬಂಧಕ್ಕೆ ನಿಮ್ಮಮ್ಮ ಆಗಲೇ ಒಪ್ಪಿಗೆ ತಿಳಿಸೇ ಇದ್ದಾಳೆ. ಹುಡುಗಿ ನೋಡಿ ನಿನ್ನ ಒಪ್ಪಿಗೆ ತಿಳಿಸುವುದಕ್ಕೆ ತಾನೆ ನೀನು ಇಲ್ಲಿಗೆ ಬಂದಿರುವುದು?" ಎಂದು ಸುಬ್ಬಯ್ಯ ನುಡಿದರು.

ಎಲ್ಲವೂ ಸರಿಯಾಗಿ ಕಂಡಿತು ನಾರಾಯಣಮೂರ್ತಿಗೆ. ನಾಗಪ್ಪನವರು ನೀವು ತಾವು ಅಂತ ಬಹುವಚನದಲ್ಲಿ ಮಾತಾಡಿಸಿ ಮರ್ಯಾದೆ ಬೇರೆ ತೋರಿಸುತ್ತಿದ್ದರು. ಹೂ ಎಂದು ಹೇಳಲು ನಿಶ್ಚಯ ಮಾಡುವಷ್ಟರಲ್ಲಿ— "ಶುಭಸ್ಯ ಶೀಘ್ರಂ, ಆಗಿಹೋಗಲಿ" ಎಂದು ಹೆಡ್ ಗುಮಾಸ್ತೆ ಹಿರಿಯಣ್ಣಯ್ಯನವರು ಬಾಯಿ ಹಾಕಿ ಒಂದು ಚಿಟಿಕೆ ನಶ್ಯ ಏರಿಸಿದರು. ನಶ್ಯದ ಧೂಳು ಹಾರಿ ಅವರ ಪಕ್ಕದಲ್ಲೇ ಕುಳಿತಿದ್ದ ಹೆಡ್ಮೇಷ್ಟರು ಎರಡುಸಲ ಸೀತರು. ಜೋಯಿಸರು— "ಹಿರಿಯಣ್ಣಯ್ಯನವರು ಅಪ್ಪಣೆ ಕೊಡಿಸಿದ್ದು ಸರಿಯೆ. ಶುಭಸ್ಯ ಶೀಘ್ರಂ. ಹೆಡ್ಮೇಷ್ಟರು ಬೇರೆ ಒಳ್ಳೆಯ ಶಕುನ ನುಡಿದಿದ್ದಾರೆ" ಎಂದು ಕಂಕುಳಲ್ಲಿ ಇಟ್ಟಿದ್ದ ಗಂಟು ಬಿಚ್ಚಿ, ಪಂಚಾಂಗ ತೆಗೆದು, ಗಂಟೆ ಬಾರಿಸಿಯೆ ಬಿಟ್ಟರು. ಕೂಡಲೆ ನಾಗಪ್ಪನವರು ಎದ್ದುಹೋಗಿ, ಸಿದ್ಧವಾಗಿರಿಸಿದ್ದ ಹೂವು, ಹಣ್ಣುಹಂಪಲು, ಕಾಗದ, ಮಸಿ ಮುಂತಾದ ಸಾಮಗ್ರಿಯೆಲ್ಲವನ್ನೂ ತಂದು ಕ್ಷಣದಲ್ಲಿ ಅಣಿಗೊಳಿಸಿಬಿಟ್ಟರು. ಅರ್ಧ ಗಂಟೆಯಲ್ಲಿ ಲಗ್ನಪತ್ರಿಕೆ ಆಗಿಯೇಹೋಯಿತು. ಗಂಡಿನ ಪರವಾಗಿ ಸುಬ್ಬಯ್ಯನವರೇ ಲಗ್ನಪತ್ರಿಕೆ ಸ್ವೀಕರಿಸಿದರು. ಆಮೇಲೆ ರಾತ್ರಿಯಲ್ಲಿ ಬಂದಿದ್ದವರಿಗೆಲ್ಲ ಪುಷ್ಕಳವಾದ ಭೋಜನವಾಯಿತು. ಮಾರನೆಯ ದಿನವೇ ನಾರಾಯಣಮೂರ್ತಿ ಊರಿಗೆ ಹೊರಟ. ನಾಗಪ್ಪನವರು ತಮ್ಮ ಭಾವಿ ಅಳಿಯನಿಗೆ ಒಬ್ಬಂಟ್ಟಂಚಿನ ಮೇಲುಕೋಟೆ ಪಂಚೆ ಉಡುಗೊರೆ ಕೊಟ್ಟರು. ಮತ್ತು ಸುಬ್ಬಯ್ಯನವರ ಕೈಲಿ ೫೦ ರೂಪಾಯಿ ಕೊಟ್ಟು ವರನಿಗೆ ಒಳ್ಳೆಯ ಉಡುಪು ಹೊಲಿಯು

ಹಾಕಬೇಕೆಂದು ಹೇಳಿದರು. ವರೋಪಚಾರಕ್ಕೆ ಬೇಕಾದ ಇತರ ಸಾಮಾನು ಗಳನ್ನು ಕೊಳ್ಳಲು ತಾವು ಇನ್ನೆರಡು ಮೂರು ದಿನಗಳಲ್ಲಿ ಮೈಸೂರಿಗೆ ಬರುವುದಾಗಿಯೂ, ಆಗ ಅವನ ತಾಯಿಯನ್ನು ಕಂಡು ಉಳಿದ ವಿಚಾರ ಗಳನ್ನು ಮಾತಾಡುವುದಾಗಿಯೂ ನಾಗಪ್ಪನವರು ನಾರಾಯಣಮೂರ್ತಿಗೆ ತಿಳಿಸಿದರು.

## ೭

### ಹೊರಗೆ ಹೇಗೆ ಕಂಡರೇನು ? ಮನಸ್ಸೊಪ್ಪಿದ್ದೆಲ್ಲ ಚೆನ್ನ

ನಾರಾಯಣಮೂರ್ತಿ ಹಿಂದಿರುಗಿ ಬಂದ ಕೂಡಲೆ ಗೌರಿ ಅವನನ್ನು ಪ್ರಶ್ನಿಸಿ ಪ್ರಶ್ನಿಸಿ ಕಾಡಿದಳು. ಅವಳ ಮೊದಲ ಪ್ರಶ್ನೆ–"ಹುಡುಗಿ ಹೇಗಿದ್ದಾಳೆ?" "ಕಂಠ ಬಹಳ ಚೆನ್ನಾಗಿದೆ. ಚೆನ್ನಾಗಿ ಹಾಡುತ್ತಾಳೆ" ಎಂದು ನಾರಾಯಣಮೂರ್ತಿ ಉತ್ತರ ಕೊಟ್ಟ. ಅವನು ಬಹಳ ಹೊತ್ತು ಲಜ್ಜೆಯಿಂದ ಸುಮ್ಮನಿದ್ದು, ಗೌರಿಯ ಕಾಟ ತಡೆಯಲಾರದೆ, ಹಾಗೆ ಉತ್ತರಕೊಟ್ಟ. ಗೌರಿ ಚತುರೆ; ಈ ಉತ್ತರದಿಂದ ಸ್ವಲ್ಪ ತೃಪ್ತಳಾದರೂ ತನಗೆ ಬೇಕಾದ ಉತ್ತರವನ್ನು ತನ್ನ ತಮ್ಮನ ಬಾಯಿಂದ ಹೊರಡಿಸಬೇಕೆಂಬ ಹುಡುಗಾಟಿಕೆಯ ಹಟದ ಬಿಗುವನ್ನು ಕಡಮೆ ಮಾಡಲಿಲ್ಲ. "ಓಹೋ, ಬಹಳ ಸಂತೋಷ. ನಿಮ್ಮ ರಾಣೀಸಾಹೇಬರಿಗೆ ಅಷ್ಟು ಚೆನ್ನಾಗಿ ಹಾಡುವುದಕ್ಕೆ ಬೇರೆ ಬರುತ್ತದೆಯೊ! ಬಹಳ ಸಂತೋಷ. ನಾನು ನಿನ್ನ ಹೆಂಡತಿ - ಅಲ್ಲ, ಮರೆತೆ - ನಿನ್ನ ಹೆಂಡತಿಯಾಗುವ ಹುಡುಗಿಯ ಕಂಠ ಹೇಗಿದೆ ಎಂದು ಕೇಳಲಿಲ್ಲ. ಅವಳು ಹೇಗಿದ್ದಾಳೆ ಎಂದು ಕೇಳಿದೆ. ಅವಳ ಮುಖ ಹೇಗಿದೆ, ಬಣ್ಣ ಹೇಗಿದೆ? ಇದು ಹೇಳು" ಎಂದಳು ಗೌರಿ.

"ನಿನ್ನ ಹಾಗಿಲ್ಲ ಗೌರಿ."

"ನನಗಿಂತ ಚೆನ್ನಾಗಿದ್ದಾಳೇನೂ! ಹಾಗಾದರೆ ಸಂತೋಷ."

"ನಿನಗಿಂತ ಚೆನ್ನೋ ಏನೋ ನಾನು ಕಾಣೆ. ನಿನ್ನ ಹಾಗಿಲ್ಲ. ಅಷ್ಟು ಬಲ್ಲೆ."

"ನನ್ನ ಹಾಗೆ ಒಬ್ಬರೂ ಇಲ್ಲ. ನನ್ನ ಸಾಮ್ಯ ಏಕೆ? ನಿಜವಾಗಿ ಹೇಳು, ನಿನ್ನ ಹೆಂಡತಿ - ಅಲ್ಲ - ಹಾಳಾದ್ದು ಮರೆತೂ ಮರೆತೂ ಹೋಗುತ್ತೆ - ನಿನ್ನ ಹೆಂಡತಿಯಾಗುವ ಹುಡುಗಿ ಹೇಗಿದ್ದಾಳೆ?"

ನಾರಾಯಣಮೂರ್ತಿಯ ಮನಸ್ಸು ನಿಜವಾಗಿಯೂ ಪೇಚಾಟಕ್ಕೆ ಸಿಲುಕಿತ್ತು. ಮಂಕುಬೆಳಕಿನಲ್ಲಿ ಹುಡುಗಿಯ ಮುಖಭಾವದ ಸ್ಪಷ್ಟಕಲ್ಪನೆ ಆಗಿರಲಿಲ್ಲ. ಆದರೂ, ಹುಡುಗಿ ಚೆನ್ನಾಗಿದ್ದಾಳೆಂದು ಅವನಿಗೆ ಅನ್ನಿಸಿತ್ತು ಅಷ್ಟೆ. ಈ ಅನಿಸಿಕೆಯನ್ನು ಗೌರಿಗೆ ಹೇಳಿದರೆ ಅವಳು ಒಪ್ಪಲಾರಳು. ಅವಳಿಗೆ ಮುಖಲಕ್ಷಣದ ವಿವರವನ್ನೆಲ್ಲ ಕೊಡಬೇಕು. ಇದು ಅವನಿಗೆ ಅಸಾಧ್ಯವಾಗಿತ್ತು. ಆದ್ದರಿಂದಲೇ ಅವನ ಮನಸ್ಸು ಅಷ್ಟು ಪೇಚಾಡುತ್ತ ಇದ್ದು, ಅವಳು ಕೇಳಿದ ಪ್ರಶ್ನೆಗಳಿಗೆ ಅವನು ಅಸ್ಪಷ್ಟವಾದ ಉತ್ತರ ಹೇಳುತ್ತಿದ್ದುದು.

"ಹುಡುಗಿಯನ್ನ ಹಾಗಾದರೆ ನೀನು ಒಪ್ಪಲಿಲ್ಲವೇನೂ?"

"ಒಪ್ಪಿದ್ದೇನೆ. ಲಗ್ನಪತ್ರಿಕೆಯೂ ಆಗಿಹೋಯಿತು."

ಈ ಸಮಾಚಾರ ಕೇಳಿ ಗೌರಿಗೆ ಅತ್ಯಾನಂದವಾಗಿಹೋಯಿತು. ಹುಡುಗಿ ಚೆನ್ನಾಗಿಯೇ ಇರಬೇಕು, ಇಲ್ಲದಿದ್ದರೆ ನಾರಾಯಣಮೂರ್ತಿ ಒಪ್ಪೋಣ ಅಂದರೇನು - ಎಂದು ಅವಳು ತರ್ಕಿಸಿದಳು. ನನ್ನ ಹೆಂಡತಿ ಹಾಗಿರಬೇಕು, ಹೀಗಿರಬೇಕು ಎಂದು ಅವನು ತನ್ನೊಡನೆ ಈಚೆಗೆ ಒಮ್ಮೊಮ್ಮೆ ಹೇಳುತ್ತಿದ್ದುದನ್ನು ಅವಳು ನೆನಪಿಗೆ ತಂದುಕೊಂಡು, ಹುಡುಗಿ ಖಂಡಿತವಾಗಿಯೂ ಚೆನ್ನಾಗಿಯೇ ಇರಬೇಕೆಂದು ನಂಬಿದಳು; ಹುಡುಗಿಯ ರೂಪ ಹೇಗೆ ಇರಬಹುದು ಎಂಬುದನ್ನು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳಹೋದಳು.

"ನೀನು ಒಪ್ಪಿದಮೇಲೆ ಸರಿ, ನಾಣು. ಹುಡುಗಿ ಚೆನ್ನಾಗಿಯೇ ಇರಬೇಕು. ಹೊರಗೆ ಹೇಗೆ ಕಂಡರೇನು? ಮನಸ್ಸೊಪ್ಪಿದ್ದೆಲ್ಲ ಚೆನ್ನ."

ಸ್ವಲ್ಪ ಹೊತ್ತಾದ ಮೇಲೆ, ಯಾರ ಮನೆಗೋ ಹೋಗಿದ್ದ ವೆಂಕಮ್ಮನವರೂ ಹಿಂದಿರುಗಿ ಬಂದರು. ಅವರು ಬಂದಕೂಡಲೆ ನಾರಾಯಣಮೂರ್ತಿ ತಾಯಿಯ ಕಾಲಿಗೆ ಎರಗಿದ. ಅವರಿಗೆ ಎಲ್ಲವೂ ಅರ್ಥವಾಯಿತು. ಕಣ್ಣಿಂದ ಹರ್ಷ ಹನಿಗಳಾಗಿ ಉಕ್ಕಿ ಬಂದು, ಅವನ ತಲೆಯ ಮೇಲೆ ಅವು ಬಿದ್ದುವು. ಇದಕ್ಕಿಂತ ಹೆಚ್ಚು ಆಶೀರ್ವಾದ ಮತ್ತೇನು ಬೇಕು? ಆದರೂ, ರೂಢಿಯಂತೆ ಆಶೀರ್ವಾದದ ಮಾತುಗಳನ್ನೂ ಉಚ್ಚರಿಸಿದರು.

ಲಗ್ನಪತ್ರಿಕೆಯಾಗಿರುವ ಸಮಾಚಾರವನ್ನು ಗೌರಿ ತಿಳಿಸಿದಳು. ವೆಂಕಮ್ಮನವರು ತುಂಬ ಸಂತೋಷಪಟ್ಟರು. ಅವರು ಹುಡುಗಿ ಹೇಗಿದ್ದಾಳೆ ಎಂಬ ಪ್ರಶ್ನೆಯನ್ನು ಕೇಳಲೇ ಇಲ್ಲ. ಮಗ ಹುಡುಗಿಯನ್ನು ಒಪ್ಪಿಕೊಂಡು ಬಂದ ಮೇಲೆ, ಹುಡುಗಿ ಹೇಗಿದ್ದರೆ ಏನು? ಹುಡುಗಿಯ ಚೆನ್ನು ಚಾರು ಕಟ್ಟಿಕೊಂಡು ತಮಗೇನು? ಅವಳು ನಡತೆವಂತಳಾಗಿ, ಒಳ್ಳೆಯ ಸೊಸೆಯಾಗಿ, ಮನೆತನದ ಹೆಸರನ್ನು ಮುಂದಕ್ಕೆ ತರುವ ಗೃಹಿಣಿಯಾಗಿ ಬಾಳಿದರೆ ಸಾಕು. ಅವರು ನಾರಾಯಣಮೂರ್ತಿಯನ್ನು ಆ ಬಗ್ಗೆ ಪ್ರಶ್ನಿಸಲೇ ಇಲ್ಲ. ಅತ್ತೆ ಮಾವಂದಿರ ವಿಚಾರ, ಅವರು ಮಾಡಿದ ಉಪಚಾರದ ವಿಚಾರ, ಅವರು ಏನಾದರೂ ಮಾತು ಕೊಟ್ಟಿದ್ದರೆ ಹೇಗೆ? – ಇವುಗಳನ್ನು ಕೇಳಿದರು. ಈ ವಿಚಾರಗಳ ಬಗ್ಗೆ ನಾರಾಯಣಮೂರ್ತಿ ಏನೂ ತಿಳಿವಳಿಕೆ ಹೊಂದಿರಲಿಲ್ಲ. ಇನ್ನು ಎರಡು ಮೂರು ದಿನಗಳಲ್ಲಿ ಸುಬ್ಬಯ್ಯವಾವಯ್ಯನೂ ನಾಗಪ್ಪನವರೂ ಬರುವುದಾಗಿಯೂ ಆಗ ಎಲ್ಲಾ ಗೊತ್ತಾಗುವುದಾಗಿಯೂ ಹೇಳಿದ. ಹೇಳಿ, ತನಗೆ ಕೊಟ್ಟಿದ್ದ ಉಡುಗೊರೆಯನ್ನು ತಾಯಿಗೆ ತೋರಿಸಿದ. ಅವರು ಹಿರಿಹಿರಿ ಹಿಗ್ಗಿಹೋದರು. "ನಾಣು, ಅಪರು ಇಂಥ ಪಂಚೆ ಉಟ್ಟಿದ್ದೇ ನಾನು ನೋಡಲಿಲ್ಲ. ನೀನಾದರೂ ಈಗ ಉಡುವ ಭಾಗ್ಯ ದೇವರು ಕೊಟ್ಟನಲ್ಲ, ಅಷ್ಟೇ ಸಾಕು" ಎಂದು ತಮ್ಮ ಅಪಾರ ಆನಂದವನ್ನು ವ್ಯಕ್ತಪಡಿಸಿದರು ವೆಂಕಮ್ಮನವರು. ನಾರಾಯಣಮೂರ್ತಿಗಾದರೂ ಉಡುಗೊರೆ ಕಂಡು ಬಹಳ ಸಂತೋಷವಾಗಿತ್ತು. ಲಗ್ನಪತ್ರಿಕೆಯ ದಿನದ ರಾತ್ರಿ ನಾಗಪ್ಪನವರ ಮನೆಯಲ್ಲಿ ಅವನಿಗೆ ನಡೆದ ಉಪಚಾರ ಅಂಥಾದ್ದೇನೂ ಅಮೋಘವಾಗಿಲ್ಲದಿದ್ದರೂ, ಈ ಭಿಕ್ಷಾನ್ನದ ಬ್ರಾಹ್ಮಣ ಹುಡುಗನಿಗೆ ಅದೇ ಪರಮೋಪಚಾರವಾಗಿ ಪರಿಣಮಿಸಿತ್ತು; ಅವರ ಮನೆಯಲ್ಲಿ ಅಂದಿನ ರಾತ್ರಿ ಮಾಡಿದ್ದ ಚಿತ್ರಾನ್ನ, ಪಾಯಸದ ಊಟವೇ ಅವನಿಗೆ ಮೃಷ್ಟಾನ್ನ ಭೋಜನವಾಗಿ ಕಂಡಿತ್ತು; ಅವರು ಕೊಟ್ಟ ಉಡುಗೊರೆಯನ್ನು, ಮಂಡಿಯ ಮೇಲೆ ಪಂಚೆ, ಹರಕು ಅಂಗಿ, ಹಾಸನದ ಟೋಪಿ – ಇವನ್ನು ಧರಿಸುತ್ತಿದ್ದ ಅವನು ಅತ್ಯಮೂಲ್ಯವಾಗಿ ಭಾವಿಸಿದ್ದನು; ಅವನು ಹುಡುಗಿಯನ್ನೂ ಮನಸಾರೆ ಒಪ್ಪಿಬಿಟ್ಟಿದ್ದನು. ಈ ಸ್ಥಿತಿಯಲ್ಲಿ ತನಗೆ ಉಂಟಾಗಿದ್ದ ಅಪಾರ ಸಂತೋಷ ತೃಪ್ತಿಗಳನ್ನು ತನ್ನ ತಾಯಿಗೆ ತಿಳಿಸಲು ಅವನಿಗೆ ಮಾತೇ ಬರಲಿಲ್ಲ. ಅವರು ಮತ್ತೆ ಮತ್ತೆ

ಕೇಳುತ್ತಿದ್ದ ಪ್ರಶ್ನೆಗಳಿಗೆ, "ರಾತ್ರಿ ಮಲಗಿಕೊಂಡಾಗ ಎಲ್ಲ ಹೇಳುತ್ತೇನಮ್ಮ" ಎಂದು ಅಷ್ಟೇ ಉತ್ತರಕೊಟ್ಟ. ಇದರಿಂದ, ಮಗನಿಗೆ ಹೇಳಲು ನಾಚಿಕೆ ಎಂದು ವೆಂಕಮ್ಮನವರು ಭಾವಿಸಿದರು.

೮

## ಮದುವೆಯ ಉಡುಪಿಗೆ ಮೂವತ್ತು ರೂಪಾಯಿ

ಸುಬ್ಬಯ್ಯ ಮಾವಯ್ಯ ಮಾರನೆಯ ದಿನವೆ ಬಂದರು. ನಾರಾಯಣ ಮೂರ್ತಿಯು ಕೂಡ ನಾಗಪ್ಪನವರ ಸಂಗಡಲೆ ತಾವು ಬರುವುದಾಗಿ ಹೇಳಿದ್ದರು. ಈಗ ಇಷ್ಟು ಮುಂಚೆ ಬಂದದ್ದು ನಾರಾಯಣಮೂರ್ತಿಗೆ ಆಶ್ಚರ್ಯವಾಯಿತು.

ಸುಬ್ಬಯ್ಯ ನೇರವಾಗಿ ವೆಂಕಮ್ಮನವರ ಸಂಗಡ ಮದುವೆಯ ವಿಚಾರ ಎಲ್ಲವನ್ನೂ ಆದ್ಯಂತವಾಗಿ ವಿವರಿಸತೊಡಗಿದರು.

"ನಾನು ನಾಗಪ್ಪನವರ ಜೊತೆಯಲ್ಲಿಯೇ ಬರಬೇಕಾಗಿತ್ತು. ಇನ್ನು ಅವರ ಜೊತೆಯಲ್ಲಿ ಬಂದುಬಿಟ್ಟರೆ ಅವರು ಇರುವಾಗ ಕೆಲವು ವಿಚಾರಗಳನ್ನು ಮಾತಾಡುವುದಕ್ಕಾಗುವುದಿಲ್ಲ. ಆದ್ದರಿಂದ ಮುಂಚೆಯೇ ಹೊರಟುಬಂದೆ. ನಾಗಪ್ಪನವರು ನನ್ನ ಕೂಡ ೫೦ ರೂಪಾಯಿ ಕೊಟ್ಟಿದ್ದಾರೆ. ನಾರಾಯಣ ಮೂರ್ತಿಗೆ ಅದರಲ್ಲಿ ಸದ್ಯಕ್ಕೆ ಎರಡು ಸರ್ಜ ಕೋಟು, ನಾಲ್ಕು ಷರಟು, ಒಂದು ಜೊತೆ ಜೋಡು, ಒಂದು ಜೊತೆ ಷರಾಯಿ – ಇಷ್ಟು ತೆಗೆದುಕೊಡುತ್ತೇನೆ. ಅವರು ಬಂದಾಗ ಸಂಕಲಿಕೆ, ಬೆಳ್ಳಿ ಪಾತ್ರೆ ಮುಂತಾದ್ದನ್ನು ತೆಗೆಯುತ್ತಾರೆ. ಆಗಲೇ ಹೊತ್ತಾಗಿ ಹೋಯಿತು. ಇನ್ನು ನಾರಾಯಣ ಮೂರ್ತಿಯನ್ನು ಪೇಟೆಗೆ ಕರೆದುಕೊಂಡು ಹೋಗಬೇಕು. ಏಳಪ್ಪ ನಾಣು, ಹೊತ್ತಾಯಿತು."

"ಹೋಗು ನಾಣು, ಹೊತ್ತಾಗುತ್ತೆ; ಸುಬ್ಬಪ್ಪ ನಮ್ಮವನೆ. ಅವನ ಜೊತೆ ಹೋಗಿ ಸಂಕೋಚಪಟ್ಟುಕೊಳ್ಳದೆ ಬೇಕಾದ ಬಟ್ಟೆ ತೆಗೆದುಕೊ, ಹೋಗು" ಎಂದು ವೆಂಕಮ್ಮನವರು ಬಾಯಿ ಬಾಯಿ ಬಿಡುತ್ತ ಮಗನನ್ನು ಒತ್ತಾಯಪಡಿಸಿದರು.

ಸುಬ್ಬಯ್ಯ ನಾರಾಯಣಮೂರ್ತಿ ಇಬ್ಬರೂ ಪೇಟೆಗೆ ಹೋದರು. ಸುಬ್ಬಯ್ಯ ತಿಳಿಯದವನೇನೂ ಅಲ್ಲ; ಇಷ್ಟಪಟ್ಟಿದ್ದರೆ ಸೊಗಸಾದ ಬಟ್ಟೆ ತೆಗೆದು ನಾರಾಯಣಮೂರ್ತಿಗೆ ಹೊಲಿಸಿಕೊಡಬಹುದಾಗಿತ್ತು. ಹುಡುಗ ಒಪ್ಪಿದ್ದನ್ನು ಹೊಲಿಸಿಕೊಡಿ ಎಂದು ನಾಗಪ್ಪನವರು ಸೂಚನೆ ಕೊಟ್ಟಿದ್ದರಿಂದ ತನಗೇಕೆ ಜವಾಬುದಾರಿ ಎಂದು, 'ನಿನಗೆ ಬೇಕಾದ ಬಟ್ಟೆ ಹೊಲಿಸಿಕೊಳ್ಳಪ್ಪ' ಎಂದು ಸುಬ್ಬಯ್ಯ ಬಟ್ಟೆಯ ಆಯ್ಕೆಯ ವಿಚಾರವನ್ನು ನಾರಾಯಣಮೂರ್ತಿಗೇ ಬಿಟ್ಟುಬಿಟ್ಟರು. ನಾರಾಯಣಮೂರ್ತಿ ಎಲ್ಲಿ ಬಹಳ ಬೆಲೆಯ ಬಟ್ಟೆ ಆಯ್ದು ಬಿಡುತ್ತಾನೋ, ನಾಗಪ್ಪನವರು ತಮ್ಮ ಬಳಿ ಕೊಟ್ಟಿದ್ದ ಹಣ ಎಲ್ಲಿ ಸಾಲದೇ ಬರುತ್ತದೋ ಎಂದು ಸುಬ್ಬಯ್ಯನವರಿಗೆ ಭಯವಾಗಿತ್ತು. ಆದರೆ ನಾರಾಯಣಮೂರ್ತಿ ಮಾಡಿದ ಆಯ್ಕೆಯಿಂದ ಸುಬ್ಬಯ್ಯ ಭಯಪಡಲು ಕಾರಣ ಉಳಿಯಲಿಲ್ಲ. ಹರಕು ಬಟ್ಟೆ ತೊಡುತ್ತಿದ್ದ ನಾರಾಯಣಮೂರ್ತಿಗೆ ಹೊಸ ಬಟ್ಟೆ ಕಂಡದ್ದೇ ಹಬ್ಬವಾಗಿತ್ತು. ಅತ್ಯಲ್ಪ ಬೆಲೆಯ ಬಟ್ಟೆಯನ್ನೇ ಅವನು ಆರಿಸಿದ. ಹೆಚ್ಚಿನ ಬೆಲೆಯ ಬಟ್ಟೆ ಆರಿಸೆಂದು ಸುಬ್ಬಯ್ಯ ಸಲಹೆ ಕೊಡಬಹುದಾಗಿದ್ದರೂ, ದುಡ್ಡು ಮಿಕ್ಕರೆ ನಾಗಪ್ಪನವರಿಂದ ಶಾಭಾಸುಗಿರಿ ದೊರೆಯುವುದೆಂಬ ಆಸೆಯಿಂದ ಆತ ಹಾಗೆ ಮಾಡುವುದಕ್ಕೆ ಹೋಗಲಿಲ್ಲ. ನಾರಾಯಣಮೂರ್ತಿ ಒಂದೇ ಅಂಗಿ ಸಾಕು ಎಂದ; ಒಂದು ವರಪೂಜೆಯ ಅಂಗಿ, ಇನ್ನೊಂದು ನಾಗೋಲಿಯ ಅಂಗಿ ಎಂದು ಸುಬ್ಬಯ್ಯ ಬಲವಂತ ಮಾಡಿದಮೇಲೆ ಅವನು ಎರಡನೆಯ ಅಂಗಿಗೆ ಒಪ್ಪಿದ. ಜೋಡನ್ನೂ ಷರಾಯನ್ನೂ ಖಂಡಿತ ಬೇಡವೆಂದ; ಅವನು ಅವನ್ನು ಎಂದೂ ಧರಿಸಿದವನೇ ಅಲ್ಲ. ಹೀಗಾಗಿ, ಅವನ ಮದುವೆಯ ಉಡುಪಿಗೆ ೩೦ ರೂಪಾಯಿನ ಮೇಲೆ ಹಿಡಿಯಲಿಲ್ಲ.

ಮಾರನೆಯ ದಿನ ನಾಗಪ್ಪನವರೂ ಬಂದರು. ಬಂದವರು ನಾರಾಯಣ ಮೂರ್ತಿಯ ಮನೆಯಲ್ಲೇ ಇಳಿದುಕೊಂಡರು. ಅಂದು ರಾತ್ರಿ ಅವರು ಸಂಧ್ಯಾವಂದನೆಮಾಡಿ ಮಡಿಯಲ್ಲೇ ಊಟಕ್ಕೆ ಕುಳಿತದ್ದು ವೆಂಕಮ್ಮನವರಿಗೆ ತುಂಬ ಮೆಚ್ಚಾಯಿತು. ಅಷ್ಟೊಂದು ಅನುಕೂಲಸ್ಥರಾದವರು ಬಡವರ ಗೂಡಿನಲ್ಲಿ ಬಂದು ಇಳಿದುಕೊಂಡರಲ್ಲ, ಎಷ್ಟು ಮರ್ಯಾದಸ್ಥರು, ಎಂಥ ಸರಳ ಸ್ವಭಾವದವರು ಎಂದು ಗೌರಿಗೂ ನಾರಾಯಣಮೂರ್ತಿಗೂ ಸಂತೋಷ

ವಾಗಿ, ಅವರಲ್ಲಿ ಗೌರವ ಬುದ್ಧಿ ಉಂಟಾಯಿತು. 'ಒಳ್ಳೆಯ ರೂಪವಂತೆ ಯಾದ ಹೆಂಡತಿ ದೊರೆತಳು, ಅನುಕೂಲಸ್ಥರಾದ ಮಾವ ದೊರೆತರು ; ಇನ್ನು ನನ್ನ ಕಷ್ಟ ಪರಿಹಾರವಾಯಿತು ; ಸುಖದ ದಿನಗಳು ಮೊದಲಾದುವು' ಎಂದು ನಾರಾಯಣಮೂರ್ತಿ ಮನಸ್ಸಿನಲ್ಲಿ ಹಿಗ್ಗತೊಡಗಿದ.

ಮಾರನೆಯ ಬೆಳಗ್ಗೆ ನಾಗಪ್ಪನವರು ಸುಬ್ಬಯ್ಯನವರನ್ನೂ ಸಂಗಡ ಕರೆದುಕೊಂಡುಹೋಗಿ ವರೋಪಚಾರದ ಸಾಮಗ್ರಿಗಳನ್ನು ತೆಗೆದುಕೊಂಡು ಬಂದು, ಅವನ್ನು ನಾರಾಯಣಮೂರ್ತಿಗೂ ವೆಂಕಮ್ಮನವರಿಗೂ ತೋರಿಸಿದರು. ತಾವು ಹೊರಡುವ ಮುನ್ನ ಪ್ರಯಾಣದ ವೆಚ್ಚ ಮೊದಲಾದವುಗಳಿಗಾಗಿ ಸ್ವಲ್ಪ ಹಣವನ್ನು ನಾರಾಯಣಮೂರ್ತಿಯ ಕೈಗೆ ಕೊಟ್ಟುಹೋದರು.

## ೯

### ಹೆಣ್ಣು ನೋಡವುದಕ್ಕೂ ಹಣ್ಣು ಕೊಳ್ಳುವುದಕ್ಕೂ ಒಬ್ಬರಿಗಿಂತ ಇಬ್ಬರು ಲೇಸು

ನಾರಾಯಣಮೂರ್ತಿಗೆ ಹತ್ತಿರದ ನೆಂಟರು ಯಾರೂ ಇರಲಿಲ್ಲ. ದೂರದ ಒಬ್ಬಿಬ್ಬರು ನೆಂಟರಿಗೆ ವೆಂಕಮ್ಮನವರೇ ನಾರಾಯಣಮೂರ್ತಿಗೆ ಹೇಳಿ ಲಗ್ನಪತ್ರಿಕೆ ಕಳಿಸಿಕೊಟ್ಟಿದ್ದರು. ಅಂತೂ ಅತ್ತಿಗುಪ್ಪೆಗೆ ಹೊರಡುವಾಗ ವೆಂಕಮ್ಮ, ಗೌರಿ, ನಾರಾಯಣಮೂರ್ತಿ - ಇಷ್ಟೇ ಜನ ಹೊರಡಬೇಕಾಯಿತು. ಮೂರು ಜನ ಹೊರಡಬೇಕಾಗುತ್ತದಲ್ಲ ಎಂದು ವೆಂಕಮ್ಮನವರೂ, ಗೌರಿಯೂ ಶಂಕಿಸಿದರು. ನಾರಾಯಣಮೂರ್ತಿ ತನ್ನ ಆಪ್ತ ಸ್ನೇಹಿತ ಶೇಷಗಿರಿಯನ್ನು ಜೊತೆಯಲ್ಲಿ ಬರುವಂತೆ ಒತ್ತಾಯಪಡಿಸಿದ. ಅವನೂ ಬಡವರ ಹುಡುಗನೆ ಪಾಪ; ದುಡ್ಡಿಲ್ಲವೆಂದು ಗೊಣಗಿದ. ನಾರಾಯಣಮೂರ್ತಿ ತಾನು ದುಡ್ಡು ಕೊಡುವುದಾಗಿ ಹೇಳಿದ. ಶೇಷು ಪಾರದ ಹುಡುಗ ; ಬುದ್ಧಿವಂತ ; ಸಣ್ಣ ವಯಸ್ಸಿನವನಾದರೂ ತುಂಬ ಅನುಭವಪಡೆದಿದ್ದನು. ನಾರಾಯಣಮೂರ್ತಿ ಯಲ್ಲಿ ಅವನಿಗೆ ತುಂಬ ವಿಶ್ವಾಸ. ನಾರಾಯಣಮೂರ್ತಿ ಫ಼ೇಲಾದದ್ದರಿಂದ ಈಗ ಅವನು ಒಂದು ತರಗತಿ ಮುಂದಾಗಿದ್ದನು. ಬಹಳ ಬಲವಂತ ಮಾಡಿದ ಮೇಲೆ, ಶೇಷು ಜೊತೆಯಲ್ಲಿ ಹೊರಡಲು ಒಪ್ಪಿದ. ಅವನು ಹಾಗೆ ಒಪ್ಪಿದ್ದು ದೊಡ್ಡ ಉಪಕಾರವಾಯಿತೆಂದು ವೆಂಕಮ್ಮನವರು ಭಾವಿಸಿದರು.

ನಾಲ್ಕು ಜನರೂ ಹೊರಟು ಮದುವೆಯ ದಿನದ ಹಿಂದಿನ ಸಂಜೆ ಅತ್ತಿಗುಪ್ಪೆಯನ್ನು ತಲುಪಿದರು. ಅದೇ ಸಂಜೆ ವರಪೂಜೆ. ವರಪೂಜೆಯ ಮೆರವಣಿಗೆಗೆ ನಾಗಪ್ಪನವರು ಮೈಸೂರಿನಿಂದ ಕೋಚ್‌ಗಾಡಿ ತರಿಸಿದ್ದರು. ವರಪೂಜೆ ಎಲ್ಲ ಸಾಂಗವಾಗಿ ನೆರವೇರಿತು. ಬಿಸಿಲಡಿಗೆ ಊಟ ಮುಗಿಯುವ ಹೊತ್ತಿಗೆ ಮಧ್ಯರಾತ್ರಿ ಹನ್ನೆರಡು ಗಂಟೆಯಾಗಿತ್ತು.

ಗಂಡಿನವರು ಇಳಿದುಕೊಳ್ಳುವುದಕ್ಕೆ ಸೂರಪ್ಪನವರ ಮನೆಯನ್ನೆ ಬಿಟ್ಟುಕೊಟ್ಟಿತ್ತು. ಊಟವಾದ ಮೇಲೆ ಮಲಗಿಕೊಳ್ಳುವುದಕ್ಕೆ ಮುಂಚೆ ಸುಬ್ಬಯ್ಯ ಗಂಡಿನ ಬಿಡಾರಕ್ಕೆ ಬಂದರು. ಆಗ ವೆಂಕಮ್ಮನವರು ಸುಬ್ಬಯ್ಯನವರನ್ನು ಕುರಿತು - "ನೋಡು ಸುಬ್ಬಪ್ಪ. ಎಲ್ಲಾ ಸರಿಹೋಯಿತು. ಮೈಸೂರಿನಲ್ಲಿ ಈ ವಿಚಾರ ಪ್ರಸ್ತಾಪಿಸುವುದೇ ಮರೆತುಹೋಯಿತು. ನೀನು ದೊಡ್ಡ ಮನಸ್ಸುಮಾಡಿ ಧಾರೆಯೆರಸಿಕೊಳ್ಳಬೇಕಪ್ಪ" ಎಂದು ಕಂಬನಿ ದುಂಬಿ ಕೇಳಿಕೊಂಡರು. ಸುಬ್ಬಯ್ಯ - "ನಾನೂ ಅದನ್ನೆ ಹೇಳುವುದಕ್ಕೆ ಬಂದೆ. ನನ್ನ ಹೆಂಡತಿಯೂ ಒಪ್ಪಿದ್ದಾಳೆ" ಎಂದರು. ವೆಂಕಮ್ಮನವರಿಗೆ ತುಂಬ ಸಂತೋಷವಾಯಿತು. "ದೊಡ್ಡ ಉಪಕಾರವಾಯಿತಪ್ಪ. ಅದಿರಲಿ. ವರಪೂಜೆ ಆದ ಮೇಲೆ ಬೀಗಿತ್ತಿಯ ಜೊತೆ ಊಟಕ್ಕೆ ಕರೆಯುವುದಕ್ಕೆ ಬಂದಿತ್ತು ನೋಡು, ಆರತಿ ಹಾಡು ಹೇಳಲಿಲ್ಲವೆ, ಅದು ಸೂರಪ್ಪನ ಹುಡುಗಿಯೋ?" ಎಂದು ವೆಂಕಮ್ಮ ಕೇಳಿದರು. "ಹೌದು ವೆಂಕಕ್ಕ. ಅವಳಿಗೂ ಈಗಲೇ ಮದುವೆ ಮಾಡಬೇಕು ಅಂತಿದ್ದರು. ವರ ಸಿಕ್ಕಲಿಲ್ಲ. . . . ನಾನು ಬೇಕಾದರೆ ಇಲ್ಲೇ ಮಲಗಿಕೊಳ್ಳುತ್ತೇನೆ, ಏನು ನಾಣು?" ಎಂದರು ಸುಬ್ಬಯ್ಯನವರು. "ಏನೂ ತೊಂದರೆ ತೆಗೆದುಕೊಳ್ಳಬೇಡಿ ಮಾವಯ್ಯ. ಶೇಷು ಇದಾನೆ ಜೊತೆಗೆ" ಎಂದ ನಾರಾಯಣಮೂರ್ತಿ. "ಹಾಗಾದರೆ ಸರಿ. ಬೆಳಗಿನ ಜಾಮಕ್ಕೆ ಎಣ್ಣೆ ಶಾಸ್ತ್ರ ಆಗಬೇಕು. ಇನ್ನು ಮಲಗಿಕೊಳ್ಳಿ. ಅವಳನ್ನು ಕರೆದುಕೊಂಡು ಹೊತ್ತಿಗೆ ಮುಂಚೆ ಬರುತ್ತೇನೆ" ಎಂದು ಸುಬ್ಬಯ್ಯ ಹೊರಟುಹೋದರು.

ಮಲಗಿಕೊಂಡಾಗ ನಾಣು ಶೇಷು ಇಬ್ಬರೂ ಹರಟೆ ಹೊಡೆಯುವುದಕ್ಕೆ ಪ್ರಾರಂಭಿಸಿದರು. ನಡುನಡುವೆ ಗೌರಿಯೂ ಬಾಯಿ ಹಾಕುತ್ತಿದ್ದಳು. ಶೇಷುವಿಗೆ ನಾಣುವನ್ನು ಕೀಟಲೆ ಮಾಡಬೇಕೆಂದು ಇಷ್ಟವಿತ್ತು; ಆ ಮಾತು ಈ ಮಾತು ಆಡುತ್ತ ಮೆಲ್ಲನೆ ಕೀಟಲೆಗೆ ತೆಗೆದ:

" ನಾಣು, ನಿನ್ನ ಅತ್ತೆಯ ಜೊತೆ ಬಂದಿತ್ತು ನೋಡು, ಆ ಹುಡುಗಿಯನ್ನೆ ನಿನ್ನ ಹೆಂಡತಿ ಅಂತ ಮಾಡಿಕೊಂಡಿದ್ದೆ".

ಗೌರಿ ಗೊಳ್ಳನೆ ನಕ್ಕಳು.

" ಅಯ್ಯೋ ಪೆದ್ದೇ! ಅಷ್ಟು ತಿಳಿಯಲಿಲ್ಲವೇ ನಿನಗೆ " ಎಂದ ನಾಣು.

" ಹೋಗಲಿ, ನಿನ್ನ ಹೆಂಡತಿ ಹೇಗಿದ್ದಾಳೆ ಹೇಳು. ಆ ಹುಡುಗಿಗಿಂತಲೂ ಚೆನ್ನಾಗಿದ್ದಾಳೆ ತಾನೆ ? " ಎಂದು ಕೇಳಿದ ಶೇಷು.

" ಅಷ್ಟು ಅವಸರ ಏಕೆ ? ನಾಳೆ ನೋಡುವಿಯಂತೆ. ಅಷ್ಟರವರೆಗೂ ಮನಸ್ಸು ಬಿಗಿಹಿಡಿದುಕೊಂಡಿರು. "

ಗೌರಿ ನಡುವೆ ಸೇರಿಕೊಂಡಳು: " ನಾಣು, ಧಾರೆಯಾಗುವಾಗ ಪಟ ಹಿಡಿಯುತ್ತಾರೆ ನೋಡು, ಆಗ ವಧುವಿನ ತಲೆಯ ಮೇಲೆ ಮೊದಲು ಜೀರಗೆ ಬೆಲ್ಲ ಹಾಕಿಬಿಡು. ನೀನು ಹಾಕುವುದಕ್ಕಿಂತ ಮುಂಚೆ ಅವಳೇನಾದರೂ ನಿನ್ನ ತಲೆಯ ಮೇಲೆ ಹಾಕಿಬಿಟ್ಟಳೋ, ಆಯಿತು ನೋಡು, ಅವಳು ಹೇಳಿದ ಹಾಗೆ ನೀನು ಕೇಳಬೇಕಾಗುತ್ತೆ".

ಹೀಗೆಯೇ ಮಾತನಾಡುತ್ತ ಆಡುತ್ತ ಇರುವಲ್ಲಿ, ಗೌರಿ ನಿದ್ದೆಹೋದಳು. ಪ್ರಯಾಣ, ಉಪವಾಸ – ಇವುಗಳಿಂದ ದಣಿದಿದ್ದ ವೆಂಕಮ್ಮನವರಿಗೆ ತಲೆ ಯೂರಿದ ಕೂಡಲೆ ನಿದ್ದೆ ಬಂದುಬಿಟ್ಟಿತ್ತು. ನಾರಾಯಣಮೂರ್ತಿ ಶೇಷಗಿರಿ ಇನ್ನೂ ಮಾತನಾಡುತ್ತಲೇ ಇದ್ದರು. ನಾರಾಯಣಮೂರ್ತಿ ತನ್ನ ಮದುವೆ ಗೊತ್ತಾದ ಸಂದರ್ಭದ ವಿವರಗಳನ್ನೆಲ್ಲಾ ಶೇಷಗಿರಿಗೆ ವಿಸ್ತಾರವಾಗಿ ತಿಳಿಸಿದ.

ಶೇಷು ಹೇಳಿದ : " ನಾಣು, ನೀನು ನನಗೆ ದೊಡ್ಡ ಅನ್ಯಾಯ ಮಾಡಿದ್ದೀಯೆ. ಸಣ್ಣ ಪುಟ್ಟ ವಿಷಯಕ್ಕೆಲ್ಲ ನನ್ನನ್ನು ಕೇಳುತ್ತಲೇ ಇರುತ್ತೀಯೆ. ನಿನ್ನ ಮದುವೆ ವಿಚಾರ ನನಗೆ ಒಂದೂ ಹೇಳಲೇಬೇಡವೆ ? ಮದುವೆ ನಾಳೆ ಅಂತ ನನ್ನ ಕರೆಯೋದಕ್ಕೆ ಬಂದೆಯಲ್ಲ ಇದು ನ್ಯಾಯವೋ ?"

" ಶೇಷು, ನನ್ನದು ತಪ್ಪಾಯಿತು. ಬೇರೆ ತಿಳಿದುಕೊಳ್ಳಬೇಡ. ನನಗೆ ಏನೋ ನಾಚಿಕೆಯಾಯಿತು, ತಿಳಿಸಲಿಲ್ಲ. ಬಿಚ್ಚಿ ಹೇಳುತ್ತೇನೆ. ನೀನು ಏನು ಬೇಕಾದರೂ ತಿಳಿದುಕೊ. ಮದುವೆಗೆ ಮೂರು ಜನ ಹೊರಡಬೇಕಾಗುತ್ತದಲ್ಲ ಎಂದು ನಾಲ್ಕನೆಯವನನ್ನಾಗಿ ನಿನ್ನ ಕರೆದೆ. ನನ್ನಮೇಲೆ ಕೋಪಿಸಿಕೊಳ್ಳ ಬೇಡ."

"ಕೋಪ ಯಾಕೆ ನಾಣು. ಕೋಪವೂ ಇಲ್ಲ, ಏನೂ ಇಲ್ಲ. ಮೊದಲೇ ಗೊತ್ತಿದ್ದರೆ ಹೆಣ್ಣು ನೋಡುವುದಕ್ಕೆ ನಾನೂ ನಿನ್ನ ಕೂಡ ಬರುತ್ತಿದ್ದೆ, ಅಷ್ಟೆ."

"ನೀನು ಬಂದಿದ್ದರೆ ತಾನೆ ಏನು? ಮದುವೆ ಮಾಡಿಕೊಳ್ಳುವವನು ನಾನೇ ಹೊರತು ನೀನಲ್ಲವಲ್ಲ? ನಾನು ಪುನಃಪೂರ್ವಕವಾಗಿ ಹೆಣ್ಣು ಒಪ್ಪಿದ್ದೇನೆ."

"ನಾಣು, ನಿನಗೆ ತಿಳಿಯದು. ನಾನು ಒಂದು ಹೊಸ ಗಾದೆ ಕಟ್ಟಿದ್ದೇನೆ."

"ಏನು?"

"ಹೆಣ್ಣು ನೋಡುವುದಕ್ಕೂ ಹಣ್ಣು ಕೊಳ್ಳುವುದಕ್ಕೂ ಒಬ್ಬರಿಗಿಂತ ಇಬ್ಬರು ಲೇಸು – ಅಂತ."

ನಾಣು ಗೊಳ್ಳನೆ ನಕ್ಕ. ಶೇಷುವೂ ನಕ್ಕ. ವೆಂಕಮ್ಮನವರಿಗೆ ಎಚ್ಚರ ವಾಯಿತು. "ಏನ್ರೋ, ಇನ್ನೂ ಮಲಗಿಕೊಂಡಿಲ್ಲವೇನ್ರೋ. ಹೊತ್ತಿಗೆ ಮುಂಚೆ ಏಳಬೇಕು, ಮಲಗಿಕೊಳ್ಳೋ ನಾಣು. ನಾಳೆ ಬೇಕಾದಷ್ಟು ಮಾತಾಡುವಿಯಂತೆ" ಎಂದು ಗೊಣಗುದನಿಯಲ್ಲಿ ಹೇಳಿದರು.

ನಾಣು ಶೇಷು ಇಬ್ಬರೂ ಸುಮ್ಮನಾಗಿ, ನಿದ್ದೆಹೋದರು.

## ೧೨

### ಅಂತೂ ಮದುವೆ ಸಾಂಗವಾಗಿ ನೆರವೇರಿತು

"ಸುಮುಹೂರ್ತೇ ಸಾವಧಾನ, ಸುಲಗ್ನಾ ಸಾವಧಾನ" ಎಂದು ಜೋಯಿಸರು ಮಂತ್ರವನ್ನು ಉದ್ಘೋಷಿಸುತ್ತ ಗಂಟೆ ಬಾರಿಸುತ್ತಿದ್ದರು. ನಾಗಪ್ಪನವರ ಮನೆಯ ಹಜಾರದ ತುಂಬ ಜನ ಕಿಕ್ಕಿರಿದು ತುಂಬಿದ್ದರು. ಗಲಭೆಯೋ ಗಲಭೆಯಾಗಿತ್ತು. ಮೈಸೂರಿನಿಂದ ಕರಸಿದ್ದ ಓಲಗದವರು ಎಲ್ಲ ಗಲಭೆಯನ್ನೂ ಮೀರಿಸಿ ಓಲಗ ಬಾಜಿಸುತ್ತಿದ್ದರು. ಹಸೆ ಮಣೆಯ ಒಂದು ಪಕ್ಕ ದಲ್ಲಿ ಗಂಡಸರು ಹರಟೆ ಹೊಡೆಯುತ್ತ ಕುಳಿತಿದ್ದರು; ಇನ್ನೊಂದು ಪಕ್ಕದಲ್ಲಿ ಹೆಂಗಸರು ನೆರೆದಿದ್ದರು. ಒಂದು ಕೋಣೆಯಲ್ಲಿ ಕೆಲವರು ಮಡಿಹೆಂಗಸರೊಡನೆ ವೆಂಕಮ್ಮನವರೂ ಆನಂದಾಶ್ರುಪೂರಿತರಾಗಿ ಮಗನ ಮದುವೆಯ ಸಂಭ್ರಮ ವನ್ನು ಬಿಟ್ಟಗಣ್ಣಿನಿಂದ ನೋಡುತ್ತ ಕುಳಿತಿದ್ದರು. ಯಾರು ಎಷ್ಟು ಹೇಳಿದರೂ

ಕೇಳದೆ ಗೌರಿಯೂ ತಾಯಿಯೊಡನೆಯೇ ಕುಳಿತಿದ್ದಳು. ಗೋಡೆಯ ಅಂಚಿನ ಹಸೆಮಣೆಯ ಮೇಲೆ ಪುಟ್ಟಯ್ಯ, ಅವರ ಹೆಂಡತಿ ಮತ್ತು ನಾಣು ಕುಳಿತಿದ್ದರು. ಪಕ್ಕದ ಹಸೆಮಣೆಯಮೇಲೆ ನಾಗಪ್ಪನವರೂ ಅವರ ಹೆಂಡತಿಯೂ ಕುಳಿತಿದ್ದರು. ಜೋಯಿಸರು ಕನ್ಯಾದಾನಕ್ಕೆ ಎಲ್ಲರ ಅಪ್ಪಣೆಯನ್ನೂ ಪಡೆದು, ಗಂಟೆ ಬಾರಿಸುತ್ತ ಎದ್ದುನಿಂತರು. ಇಬ್ಬರು ಒಂದು ಶಾಲನ್ನು ತಂದು ಅಂತಃಪಟ ಹಿಡಿದು ನಿಂತರು. ಜೋಯಿಸರ ಸೂಚನೆಯ ಮೇರೆಗೆ ನಾರಾಯಣಮೂರ್ತಿ ಬೊಗಸೆಯಲ್ಲಿ ಜೀರಗೆ ಬೆಲ್ಲ ಹಿಡಿದು, ವಧುವಿನ ಶಿರಾಗ್ರದಮೇಲೆ ವರ್ಷಿಸಲು ತವಕಗೊಂಡು ನಿಂತಿದ್ದನು. ವಧುವಿನ, ತನ್ನ ಬಾಳ ಗೆಳತಿಯ, ಪ್ರಥಮ ಸಮಗ್ರ ಸಂದರ್ಶನ ಮಾಡಲು ಮೈಯೆಲ್ಲಾ ಕಣ್ಣಾಗಿ ನಿರೀಕ್ಷಿಸುತ್ತ ನಿಂತಿದ್ದನು. ಹೆಣ್ಣಿನ ಸೋದರಮಾವ ಹೆಣ್ಣನ್ನು ಎತ್ತಿಕೊಂಡು ಬಂದು ಪಟದ ಹಿಂದೆ ನಿಲ್ಲಿಸಿಕೊಂಡರು. ತೆರೆಯ ಹಿಂದೆ ತನ್ನ ವಧು ನಿಂತಿದ್ದಾಳೆ; ಇನ್ನು ಒಂದು ನಿಮಿಷ, ನಿಮಿಷವೂ ಇಲ್ಲ - ಒಂದು ಕ್ಷಣ - ಕಣ್ದುಂಬಿ ಅವಳ ಮುಖಕಮಲವನ್ನು ಎರಗಿ ಅಲ್ಲಿ ಕ್ರೀಡಿಸುವುದು ; ಅವಳು ತನ್ನವಳಾಗುವಳು ; ತನ್ನ ಬಾಳು ಸಾರ್ಥಕವಾಗುವುದು ; ತಾಯಿಗೂ, ಅಕ್ಕನಿಗೂ ಅಮಿತವಾದ ಆನಂದವಾಗುವುದು. . . ತಾಯಿ, ಅಕ್ಕನ ನೆನಪು ಬಂದೊಡನೆ ಹಾಗೆಯೇ ಅವರು ಕುಳಿತಿದ್ದ ಕೋಣೆಯ ಕಡೆ ತಿರುಗಿ ನೋಡಿದ . . . ಮುಗುಳ್ನಗೆ ನಕ್ಕ . . ತಾಯಿಯಾಗಲಿ ಗೌರಿಯಾಗಲಿ ಮಾರುತ್ತರವಾಗಿ ಮುಗುಳ್ನಗೆ ನಗಲಿಲ್ಲ. ಯಾರಾದರೂ ಅವರಿಗೆ ಅಪಚಾರ ಮಾಡಿರಬಹುದೆ ? . . . ಇರಬಹುದು . . . ಆಮೇಲೆ ವಿಚಾರಿಸಿದರಾಯಿತು– ಇಷ್ಟೆಲ್ಲ ಭಾವತರಂಗಗಳು ಅವನಲ್ಲಿ ವಿದ್ಯುದ್ವೇಗದಿಂದ ಮಿಂಚಿ ಮಾಯವಾಗಿ, ಅವನು ಕ್ಷಣಕಾಲ ಮೈಮರೆತಂತಿರಲು, ತಲೆಯ ಮೇಲೆ ಏನೋ ಸುರಿವಂತಾ ಯಿತು. ನಾಣುವಿಗೆ ಎಚ್ಚರವಾದಂತಾಯಿತು. ಅದು ವಧು ತನ್ನ ತಲೆಯ ಮೇಲೆ ಚೆಲ್ಲಿದ ಜೀರಗೆ ಬೆಲ್ಲವೆಂದು ಗೊತ್ತಾಯಿತು. ಗೌರಿ ಹೇಳಿದ ಮಾತುಗಳು ನೆನಪಿಗೆ ಬಂದುವು. ಧೀರಪ್ರಸನ್ನವದನವುಳ್ಳವನಾಗಿ ತನ್ನ ಕೈಯನ್ನು ಮೇಲಕ್ಕೆತ್ತಹೋದ ; ತೆರೆಹಿಡಿದಿದ್ದವರು ಅದನ್ನು ತಗ್ಗಿಸಿದ್ದರು ; ವಧುವಿನ ಮುಖದರ್ಶನವಾಯಿತು. ನಾಣು ಬೆಚ್ಚಿಬಿದ್ದ ; ಅವನ ಕೈ ನಡುಗಿತು ; ಮನಸ್ಸನ್ನು ಕತ್ತಲೆ ಆವರಿಸಿದಂತಾಯಿತು ; ಏನೂ ತೋಚಲಿಲ್ಲ ;

ಜೀರಗೆ ಬೆಲ್ಲವನ್ನು ಕೆಳಕ್ಕೆ ಸುರಿದು, ತಲೆಬಾಗಿ ನಿಂತ ; ಜೋಯಿಸರು, "ಏಕಯ್ಯ, ಹಿಡಿ ; ವಧು ಮೊದಲು ಸೇಸೆ ಹಾಕಿದಳೆಂದು ಅಸಮಾಧಾನ ವೇನಯ್ಯ? ಅವೆಲ್ಲ ಸುಳ್ಳು ; ಯಾರು ಮೊದಲು ಹಾಕಿದರೇನಂತೆ, ಹಿಡಿ ಯಯ್ಯಾ" ಎಂದು ಜೀರಗೆ ಬೆಲ್ಲ ಸಿಕ್ಕದೆ ಒಂದಿಷ್ಟು ಮಂತ್ರಾಕ್ಷತೆ ಕೊಡ ಬಂದರು. ನಾರಾಯಣಮೂರ್ತಿ ದಿಗ್ಭ್ರಮೆ ಹಿಡಿದವನಂತೆ ಕದಲದೆ ನಿಂತಿದ್ದ. ಜೋಯಿಸರು ಮತ್ತೆ ಮಾತಾಡಿಸಿದರು ; ಮಾತಿಲ್ಲ. ಸುಬ್ಬಯ್ಯ ಬಹಳ ಮೃದುವಾಗಿ ಮಾತಾಡಿಸಿದರು ; ಮಾತಿಲ್ಲ. ಶೇಷು ಗಾಬರಿಯಿಂದ ಎದ್ದು ಬಂದು, "ಏನು ನಾಣು, ಮೈಗೆ ಸರಿಯಿಲ್ಲವೆ?" ಎಂದು ಕೇಳಿದ. "ಸುಬ್ಬಯ್ಯ ಮಾವಯ್ಯ, ಸ್ವಲ್ಪ ಬಂದೆ" ಎಂದು ನಾರಾಯಣಮೂರ್ತಿ ಹಸೆ ಮಣೆಯಿಂದ ಕಾಲು ತೆಗೆದ. "ಹಸೆ ಮಣೆಯಿಂದ ಎದ್ದು ಹೋಗಬಾರದು ಹೀಗೆ" ಎಂದು ಜೋಯಿಸರು ಅವನ ಕೈ ಹಿಡಿದುಕೊಂಡರು. ನೆರೆದಿದ್ದವರಲ್ಲಿ ಕೆಲವರು 'ಏನು ಸಮಾಚಾರ?' ಎಂದು ಎದ್ದು ಬಂದರು.

ನಾರಾಯಣಮೂರ್ತಿ ಯಾವ ಮಾತನ್ನೂ ಆಡದೆ, ಜೋಯಿಸರ ಕೈ ಹಿಡಿತವನ್ನು ಕೈಕೊಡವಿ ಬಿಡಿಸಿಕೊಂಡು, "ಬಾ ಶೇಷು" ಎಂದು ತನ್ನ ತಾಯಿ ಕುಳಿತಿದ್ದ ಕೋಣೆಯ ಕಡೆಗೆ ಹೋದ. ಅಲ್ಲಿದ್ದ ಹೆಂಗಸರೆಲ್ಲ ಹೊರಕ್ಕೆ ಬಂದರು. ನಾಣು ಶೇಷು ಇಬ್ಬರೂ ಕೋಣೆಯೊಳಕ್ಕೆ ಹೋದರು. ಬೀಗರು, ಬೀಗಿತ್ತಿ, ಸುಬ್ಬಯ್ಯ, ಅವರ ಹೆಂಡತಿ–ಎಲ್ಲರೂ ಬಾಗಿಲಮುಂದೆ ಬಂದು ಮುತ್ತಿದ್ದರು. "ನಾರಾಯಣಮೂರ್ತಿಗಳೇ, ಮೈಗೆ ಸರಿಯಿಲ್ಲವೆ? ಪಂಡಿತ ರನ್ನು ಕರೆಯಲೆ? . . . ನನ್ನಿಂದ ಏನು ಅಪರಾಧವಾಗಿದ್ದರೂ ಕ್ಷಮಿಸಬೇಕು. ಕನ್ಯಾದಾನವನ್ನು ಸ್ವೀಕರಿಸಿ ನನ್ನನ್ನು ಉದ್ಧಾರಮಾಡಿಬಿಡಿ ; ನೀವು ಹೇಳಿ ದಂತೆ ನಡೆದುಕೊಳ್ಳಲು ಸಿದ್ಧನಾಗಿದ್ದೇನೆ" ಎಂದು ಅಂಗಲಾಚುತ್ತ ಹೇಳ ತೊಡಗಿದರು. ಶೇಷು ಮುಂದಕ್ಕೆ ಬಂದು, "ನೀವೆಲ್ಲ ಸ್ವಲ್ಪ ಅವಕಾಶ ಕೊಟ್ಟರೆ ನಾನು ಎಲ್ಲ ವಿಚಾರಿಸುತ್ತೇನೆ. ಸ್ವಲ್ಪ ಹೋಗಿ ಮತ್ತೆ" ಎಂದು ಕೋಣೆಯ ಬಾಗಿಲನ್ನು ಹಾಕಿಬಿಟ್ಟ.

ಶೇಷು ಕೋಣೆಯ ಬಾಗಿಲು ಹಾಕಿದನೋ ಇಲ್ಲವೋ, ನಾಣು ಕೆಳಗೆ ಕುಳಿತು, ಮಂಡಿಯ ಮೇಲೆ ತಲೆಯೂರಿ ಗದ್ಗದಿಸಿ ಅಳತೊಡಗಿದ. "ಏನು ಮಗು, ಏನು ಹೇಳಬಾರದೆ, ನಿನ್ನ ದುಃಖ ನೋಡಲಾರೆನಲ್ಲೋ" ಎಂದು

ಅವರೂ ಅಳತೊಡಗಿದರು. "ಅಮ್ಮ, ಎಷ್ಟಾದರೂ ಮದುವೆ ಮನೆ. ನೀನೂ ಅವನ ಜೊತೆಯಲ್ಲಿ ಅಳುವುದೆ, ಅವನಿಗೆ ಧೈರ್ಯ ಹೇಳುವುದು ಬಿಟ್ಟು? ನಾಣಿ, ಏನಾಗುತ್ತೆ ಹೇಳಪ್ಪ. ಮೈಗೆ ಸರಿಯಾಗಿಲ್ಲವೆ?" ಎಂದು ಕೇಳಿದಳು ಗೌರಿ.

"ಸರಿಯಾಗಿದೆ" ಎಂದು ನಾಣಿ ಬಿಕ್ಕುತ್ತಲೇ ಉತ್ತರ ಕೊಟ್ಟ.

ಗೌರಿ: "ಹೆಣ್ಣು ಕಪ್ಪು ಅಂತಲೇ ನಾಣಿ? ಅಮ್ಮ ಆಗಲೇ ಹೇಳಿದಳು. ಹುಡುಗಿ ಕಪ್ಪು ಎಂದು ಅವಳ ಹುಮ್ಮಸ್ಸೇ ಹೋಗಿಬಿಟ್ಟಿದೆ. ನಾನೇ ಹೇಳಿದೆ ಅಮ್ಮನಿಗೆ– ಕಪ್ಪಾದರೇನಂತೆ, ಅವನು ಒಪ್ಪಿದ ಹುಡುಗಿ ಅಂತ."

"ಹೌದು ಗೌರಿ, ನಾನು ಒಪ್ಪಿಕೊಂಡುಬಿಟ್ಟೆ. ಮೋಸಹೋಗಿಬಿಟ್ಟೆ. ಸೂರಪ್ಪನವರ ಮಗಳನ್ನು ಮದುವೆಯ ಹೆಣ್ಣು ಎಂದು ತಿಳಿದುಕೊಂಡುಬಿಟ್ಟೆ. ಈ ಹುಡುಗಿಯನ್ನು ಮೂಲೆಯಲ್ಲಿ ಕತ್ತಲೆಯಲ್ಲಿ ಕೂರಿಸಿಬಿಟ್ಟಿದ್ದರು. ಮದುವೆಯ ಹೆಣ್ಣು ಇವಳು ಎಂದು ಅವರೂ ಸರಿಯಾಗಿ ತೋರಿಸಲಿಲ್ಲ, ನಾನೂ ಕೇಳಲಿಲ್ಲ. ಶೇಷುವನ್ನಾದರೂ ಜೊತೆಯಲ್ಲಿ ಕರೆದುಕೊಂಡು ಹೋಗಿದ್ದರೆ ಚೆನ್ನಾಗಿತ್ತು."

ಶೇಷು ಹೇಳಿದ: "ದೊಡ್ಡ ಮೋಸ ನಡೆದುಹೋಗಿದೆ. ಆದದ್ದು ಆಯಿತು. ಇನ್ನು ಮುಂದಿನ ಯೋಚನೆ ಮಾಡೋಣ. ನಾಣಿ, ಅಳುತ್ತ ಕುಳಿತರೆ ಆಗುವುದಿಲ್ಲ. ಎಲ್ಲ ಏಳಿ, ಊರಿಗೆ ಹೊರಡೋಣ. ಇವರಲ್ಲದೆ ಹೋದರೆ ಇವರಪ್ಪ ಯಾರಾದರೂ ಹೆಣ್ಣು ಕೊಡುತ್ತಾರೆ. ಇರಲಿ, ನಾಗಪ್ಪ ನವರ ಮುಖದ ಸೀರಿಳಿಕಿಬಿಡುತ್ತೇನೆ" ಎಂದು ಶೇಷು ಹಾರಾಡುತ್ತ ಕೋಣೆಯ ಬಾಗಿಲು ತೆಗೆದುಕೊಂಡು ಆಚೆಗೆ ಹೋದ.

ಶೇಷು ಹೊರಟುಹೋದ ಮೇಲೆ, "ಏನು ಮಾಡೋದು, ಏನು ಮಾಡೋದು, ಹೀಗಾಗಿ ಹೋಯಿತಲ್ಲ. ಮದುವೆ ಮಾಡಿಕೊಂಡರೆ ನಾಣಿ ಬೇಡದ ಹೆಣ್ಣನ್ನು ಕಟ್ಟಿಕೊಂಡು ಒದ್ದಾಡಬೇಕು; ಮಾಡಿಕೊಳ್ಳದೆ ಹೋದರೋ, ಊರಲ್ಲೆಲ್ಲ ಗುಲ್ಲಾಗುತ್ತೆ. ಅವರಂತೂ ದೊಡ್ಡಮನುಷ್ಯರು. ಹೇಗೋ ನಿಭಾಯಿಸಿಕೊಂಡು ಬಿಡುತ್ತಾರೆ. ನಾವು ತಾನೆ ಬಡವರು, ಎಲ್ಲರೂ ನಮ್ಮ ಮೇಲೇ ತಪ್ಪುಹೊರಿಸುತ್ತಾರೆ. ಏನು ಮಾಡೋಣೆ ಗೌರಿ?" ಎಂದು ವೆಂಕಮ್ಮನವರು ಮಗಳ ಮುಖ ನೋಡಿದರು.

ಗೌರಿ ಏನನ್ನೂ ಹೇಳಲಾರದೆ ತುಸ ಹೊತ್ತು ಮೌನದಿಂದ ಕುಳಿತಿದ್ದಳು. ಆಮೇಲೆ, ನಾಣುವಿನ ಕಡೆ ತಿರುಗಿ - "ನಾಣು, ನಾವು ಏನೂ ಹೇಳುವುದಕ್ಕಾಗುವುದಿಲ್ಲವಪ್ಪ. ನಿನಗೇನು ತಿಳಿಯದೆ. ನೀನು ಮಾಡಿಕೊಂಡರೂ ಸಂತೋಷವೆ; ಮಾಡಿಕೊಳ್ಳದೆ ಹೋದರೂ ಸಂತೋಷವೆ. ನೋಡೋಣ, ಶೇಷು ಹೋಗಿದ್ದಾನಲ್ಲ ನಾಗಪ್ಪನವರ ಸಂಗಡ ಮಾತಾಡೋದಕ್ಕೆ. ಅವರು ಏನು ಹೇಳುತ್ತಾರೊ ಕೇಳೋಣ. ಅವರೇ ತಮ್ಮ ತಪ್ಪನ್ನು ಒಪ್ಪಿಕೊಂಡು ನಮ್ಮನ್ನು ಬಿಟ್ಟುಕೊಟ್ಟರೆ ನಾವು ಪಾರಾದಹಾಗಾಗುತ್ತೆ" ಎಂದಳು.

ಎಲ್ಲರೂ ಕ್ಷಣ ಹೊತ್ತು ಮೌನದಿಂದ ಕುಳಿತಿದ್ದರು. ಶೇಷು ಹಿಂದಿರುಗಿ ಬಂದ. ಅವನೊಡನೆಯೇ ನಾಗಪ್ಪನವರೂ ಅವರ ಹೆಂಡತಿಯೂ ಬಂದರು. ನಂಜಮ್ಮ ಕಣ್ಣೀರನ್ನು ಸೆರಗಿನ ಕೊನೆಯಿಂದ ಒರಸಿಕೊಳ್ಳುತ್ತಿದ್ದರು.

ನಾಗಪ್ಪನವರು ಬಂದವರೇ ತಟ್ಟನೆ ನಾರಾಯಣಮೂರ್ತಿಯ ಕಾಲು ಹಿಡಿದುಕೊಂಡು ದಂಡ ನಮುಸ್ಕಾರ ಮಾಡಿದರು. ನಾಣುವಿಗೆ ಗಾಬರಿಯಾದಂತಾಯಿತು; ತನ್ನ ಶೋಚನೀಯ ಸ್ಥಿತಿಯನ್ನು ಮರೆತು, ನಾಗಪ್ಪನವರ ಶೋಚನೀಯ ಸ್ಥಿತಿಗೆ ಮನಗರಗಿ, "ತಾವು ಹಿರಿಯರು, ಹೀಗೆ ಮಾಡುವುದುಂಟೆ. ನೀವು ಹೇಳುವುದು ಹೇಳಿ, ಸಾವಧಾನದಿಂದ ತೀರ್ಮಾನಕ್ಕೆ ಬರೋಣ" ಎಂದು ಹೇಳಿದ. ನಾಗಪ್ಪನವರಿಗೆ ಎಷ್ಟೋ ಧೈರ್ಯ ಬಂದಂತಾಯಿತು. ಎದ್ದು ಕುಳಿತು ಹೇಳತೊಡಗಿದರು: "ನಾರಾಯಣ ಮೂರ್ತಿ, ನಾನು ನಿಮಗೆ ಮೋಸಮಾಡಬೇಕೆಂದು ಬಗೆಯಲಿಲ್ಲ. ನನ್ನ ಮಗಳು ಕಪ್ಪು, ನನ್ನ ಹಾಗೆಯೇ, ಒಪ್ಪಿಕೊಳ್ಳುತ್ತೇನೆ. ಆದರೂ ಕಾಳಗಪ್ಪಲ್ಲ; ಮೂಗು, ಕಣ್ಣು, ಎಲ್ಲ ನೇರವಾಗಿದೆ; ಲಕ್ಷಣವಾಗಿದ್ದಾಳೆ. ನೀವು ಹೆಣ್ಣು ನೋಡುವುದಕ್ಕೆ ಬಂದಾಗಲೇ ಹೆಚ್ಚು ಬೆಳಕಿನಲ್ಲಿ ನನ್ನ ಮಗಳನ್ನು ನೋಡಬೇಕೆಂದು ಇಷ್ಟಪಟ್ಟಿದ್ದರೆ ನಾನು ಬೇಡ ಎನ್ನುತ್ತಿದ್ದೆನೆ? ನೀವೇ ಒಪ್ಪಿಕೊಂಡು ಹೋದಿರಿ. ಈಗ ನೀವು ಬೇಡ ಎಂದು ಮುನಿಸಿಕೊಂಡು ಹೊರಟುಹೋದರೆ ಹುಡುಗಿಯನ್ನು ಯಾರು ಕೈ ಹಿಡಿಯುತ್ತಾರೆ?..."

ಇಷ್ಟು ಹೊತ್ತಿಗೆ ಜೋಯಿಸರು ಬಂದಿದ್ದು ಎಲ್ಲವನ್ನು ಕೇಳುತ್ತ ನಿಂತಿದ್ದರು; ನಡುವೆ ಅವರು ಬಾಯಿ ಹಾಕಿದರು; "ಸ್ವಾಮಿ, ನಾರಾಯಣ

ಮೂರ್ತಿಗಳೆ, ನಾನು ಹೇಳುವುದನ್ನು ಸ್ವಲ್ಪ ಕೇಳಿ. ನಿಮ್ಮ ಜಾತಕದಲ್ಲಿ ಈ ಹುಡುಗಿಯೇ ಬರೆದಿದೆ. ನೀವು ಒಂದು ವೇಳೆ ಈಗ ಧಾರೆಯೆರಸಿಕೊಳ್ಳದೆ ಹೊರಟುಹೋದಿರಿ ಎಂತ ಇಟ್ಟುಕೊಳ್ಳಿ. ಆ ಹುಡುಗಿಯನ್ನು ಇನ್ನು ಯಾರೂ ಮದುವೆ ಮಾಡಿಕೊಳ್ಳುವುದಿಲ್ಲ. ಮಾಡಿಕೊಳ್ಳುವವರಿದ್ದರೂ ಕೊಡುವುದಕ್ಕಾಗುವುದಿಲ್ಲ. ಏಕೆನ್ನುತ್ತೀರೋ, ಎಂದು ಹುಡುಗಿ ನಿಮ್ಮ ತಲೆಯಮೇಲೆ ಜೀರಗೆ ಬೆಲ್ಲ ಹಾಕಿದಳೋ ಅಂದು ಅವಳು ನಿಮ್ಮನ್ನು ವರಿಸಿದ ಹಾಗಾಯಿತು. ತಾಳಿ ಕಟ್ಟುವುದು ಹಣಕೊಟ್ಟು ಜಮೀನನ್ನು ಕ್ರಯಕ್ಕೆ ಕೊಂಡಮೇಲೆ ಕ್ರಯಪತ್ರ ಬರೆದಹಾಗೆ, ಅಷ್ಟೆ."

ನಾಗಪ್ಪನವರು ಮತ್ತೆ ಮೊದಲುಮಾಡಿದರು: "ನಾರಾಯಣ ಮೂರ್ತಿಗಳೇ, ಇದೋ ಐನೂರು ರೂಪಾಯಿ, ನಿಮಗೆ ಕೊಡುತ್ತೇನೆಂದು ಹೇಳಿದ್ದ ದುಡ್ಡು" ಎಂದು ಐನೂರು ರೂಪಾಯಿನ ಥೈಲಿಯನ್ನು ಅವನ ಮುಂದಿಟ್ಟು ಮುಂದುವರಿಸಿದರು: "ಧಾರೆಯ ಕಾಲದಲ್ಲಿ, ಎಲ್ಲರ ಸಮ್ಮುಖದಲ್ಲಿ, ನಾನು ಮಾತು ಕೊಟ್ಟಿದ್ದಂತೆ ಹತ್ತು ಎಕರೆ ಜಮೀನನ್ನು ಧಾರೆಯೆರೆದು ಕೊಡುತ್ತೇನೆ. ದೊಡ್ಡ ಮನಸ್ಸು ಮಾಡಿ, ಹೆಣ್ಣು ಹೆತ್ತ ನನ್ನನ್ನು ಉದ್ಧಾರ ಮಾಡಬೇಕು" ಎಂದು ಕೈ ಜೋಡಿಸಿ ಬೇಡಿಕೊಂಡರು. ಎಲ್ಲರೂ ಕುತೂಹಲ ದಿಂದ ನಾರಾಯಣಮೂರ್ತಿಯ ಮುಖವನ್ನೇ ನೋಡುತ್ತಿದ್ದರು. ನಾರಾಯಣ ಮೂರ್ತಿ ನಿಶ್ಚಯ ಮಾಡಿಬಿಟ್ಟ; ಮುಂದಿನ ಪಾಡನ್ನು ಕುರಿತು ಯೋಚಿಸ ಲಿಲ್ಲ. 'ಒಂದು ದೃಷ್ಟಿಯಲ್ಲಿ ತಪ್ಪು ನನ್ನದು. ಮಾತು ಕೊಟ್ಟ ಮೇಲೆ ಮಾತನ್ನು ಉಳಿಸಿಕೊಳ್ಳುವುದು ನನ್ನ ಕರ್ತವ್ಯ. ಮದುವೆ ಮಾಡಿಕೊಂಡ ರೇನಾಯಿತು, ಮನೆಯಲ್ಲಿ ಬಂದಿರುತ್ತಾಳೆ ಅಷ್ಟೆ. ಮನೆಗೊಂದು ಹೆಣ್ಣಾಳಾ ಯಿತು. ಅಮ್ಮನಿಗೆ ವಿರಾಮ ದೊರೆಯುತ್ತೆ' ಎಂದು ಒಂದು ಬಗೆಯ ವಿಚಿತ್ರ ತರ್ಕದಿಂದ ತೀರ್ಮಾನಕ್ಕೆ ಬಂದು, "ಆಗಲಿ. ನೀವು ಹೇಳಿದಂತೆಯೇ ಆಗಲಿ, ಏಳಿ. ಹಣ ಸದ್ಯಕ್ಕೆ ನಿಮ್ಮ ಬಳಿಯೇ ಇರಲಿ. ಹೋಗುವಾಗ ಕೊಡುವಿರಂತೆ" ಎಂದು ಮೇಲಕ್ಕೆದ್ದ. ನಾರಾಯಣಮೂರ್ತಿಯ ದೃಢ ನಿಶ್ಚಯ ಎಲ್ಲರಿಗೂ ನಲವು ಕೊಟ್ಟಿತು. ನಾಗಪ್ಪನವರೂ ಸಂಜಮ್ಮ ನವರೂ ಹಿರಿ ಹಿರಿ ಹಿಗ್ಗಿಹೋದರು. ಬಿಕ್ಕಿ ಬಿಕ್ಕಿ ಅಳುತಿದ್ದ ಜಯಲಕ್ಷ್ಮಿಯ ಮನಸ್ಸಿನಲ್ಲಿ ಸಮಾಧಾನ ಮೂಡಿತು. "ಎಲ್ಲ ಹಣೆಯ ಬರಹ. ಕಂಕಣ

ಪ್ರಾಪ್ತಿ ಇದ್ದರೆ ಯಾರಿಂದಲೂ ತಪ್ಪಿಸುವುದಕ್ಕೆ ಆಗುವುದಿಲ್ಲ. ಬಂದ ಹೆಣ್ಣೇ ಭಾಗ್ಯಲಕ್ಷ್ಮಿ" ಎಂದು ವೆಂಕಮ್ಮನವರು ಸಮಾಧಾನ ಮಾಡಿಕೊಂಡರು. ತಮ್ಮನ ಧೈರ್ಯ ಸ್ಥೈರ್ಯಗಳನ್ನು ಕಂಡು ಗೌರಿಗೆ ಆನಂದವೂ ಆಯಿತು; ಕಪ್ಪು ಹೆಂಡತಿಯಾದಳಲ್ಲ ಎಂಬ ವ್ಯಥೆಯೂ ಉಂಟಾಯಿತು. 'ಬಿಳುಪಾದರೇನು ಕಪ್ಪಾದರೇನು? ಕಪ್ಪಾಗಿರುವವರನ್ನೆಲ್ಲ ಕಾಡಿಗೆ ಕೊಂಡೊಯ್ದು ಕಡಿದು ಹಾಕುವುದಕ್ಕಾಗುತ್ತದೆಯೆ? ಎಲ್ಲರೂ ಬಿಳಿಯ ಹೆಣ್ಣುಗಳನ್ನೇ ಹುಡುಕಿಕೊಂಡು ಹೋದರೆ ಕಪ್ಪು ಹೆಣ್ಣುಗಳನ್ನು ಕೇಳುವವರಾರು? ಬಿಳಿಯ ಹೆಣ್ಣುಗಳು ಬಿಂಕದ ರಾಣಿಯರಾಗಬಹುದು, ಕಪ್ಪು ಹೆಣ್ಣುಗಳು ಕುಲದೇವತೆಯರಾಗಬಹುದು. ಗುಣ ಮುಖ್ಯವೇ ಹೊರತು ರೂಪವಲ್ಲ. ಹುಡುಗಿ ಗುಣವಂತೆಯಾಗಿರಬಹುದು'– ಎಂಬ ಸಮಾಧಾನವೂ ಮೂಡಿತು.

ಅಂತೂ ನಾರಾಯಣಮೂರ್ತಿಯ ಮದುವೆ ಸಾಂಗವಾಗಿ ನೆರವೇರಿತು. ನಾಗಪ್ಪನವರು ಮದುವೆಯನ್ನು ಬಹಳ ವೈಭವದಿಂದಲೇ ನಡಸಿದರು. ಅಳಿಯನಿಗೆ ಕೊಡಬೇಕಾದ್ದರಲ್ಲಿ ಯಾವುದನ್ನೂ ಕೊರತೆ ಮಾಡಲಿಲ್ಲ. ಈ ಭಾಗದಲ್ಲಿ ವೆಂಕಮ್ಮನವರೂ ಗೌರಿಯೂ ಸಂಪೂರ್ಣ ತೃಪ್ತರಾದರು. ನಾಗಪ್ಪನವರು ಹತ್ತು ಎಕರೆ ಜಮೀನನ್ನು ಧಾರೆಯೆರೆದುಕೊಟ್ಟರು. ಹುಡುಗಿಯ ಮೈಮೇಲೂ ತುಂಬ ಚಿನ್ನ ಹಾಕಿ ಧಾರೆಯೆರೆದು ಕೊಟ್ಟರು. ನಾರಾಯಣಮೂರ್ತಿ ಊರಿಗೆ ಹೋಗುವಾಗ ಐನೂರು ರೂಪಾಯಿಯನ್ನು ಅವನ ಕೈಗೆ ಕೊಟ್ಟರು. ಮನಸ್ಸಿನಲ್ಲಿ ಜುಗುಪ್ಸೆ ಹೊಂದಿದರೂ ಅದನ್ನು ತೆಗೆದುಕೊಂಡನು.

## ೧೧

### "ಜಯಲಕ್ಷ್ಮಿ ನಿನಗೆ ಜಯವನ್ನೂ ತರುತಾಳೆ"

ಅಂತೂ ನಾರಾಯಣಮೂರ್ತಿಯ ಮದುವೆ ಆಗಿಹೋಯಿತು. ಅವನು ಊರಿಗೆ ಹಿಂದಿರುಗಿ ಬಂದಮೇಲೆ ಮದುವೆ ಆಗುವುದಕ್ಕೆ ಮುಂಚೆ ಹೇಗೆ ಇದ್ದನೋ ಮದುವೆಯಾದಮೇಲೆಯೂ ಹಾಗೆಯೇ ಇರಲು ಪ್ರಯತ್ನಪಡುತ್ತಿದ್ದ. ಮಾವನವರು ಕೊಟ್ಟಿದ್ದ ಯಾವ ಒಂದು ಬಟ್ಟೆಬರೆಯನ್ನೂ ಧರಿಸುತ್ತಿರಲಿಲ್ಲ. ಕೆಲವು ದಿನಗಳವರೆಗೆ ತಾಯಿಯ ಕೂಡಲೀಗಲಿ, ಗೌರಿಯ

ಕೂಡ ಆಗಲಿ ಮಾತನ್ನೇ ಆಡಲಿಲ್ಲ. ಅವನಿಗೆ ಏನೋ ಒಂದು ವಿಧವಾದ ಜುಗುಪ್ಸೆ ಹುಟ್ಟಿಬಿಟ್ಟಿತ್ತು.

ಮದುವೆಯಾಗುವುದಕ್ಕೆ ಮುಂಚೆ ನಾರಾಯಣಮೂರ್ತಿಯ ಮನೋ ಮಂದಿರ ಬೆಳಕಿನಿಂದ ಕೂಡಿತ್ತು ; ಅವನ ಬಯಕೆ ಅವನು ಬಗೆದಂತೆ ರೂಪ ತಾಳಿ, ಒಂದೊಂದು ಕ್ಷಣದಲ್ಲಿ ಒಂದೊಂದು ಕನ್ಯೆಯ ರೂಪ ಧರಿಸಿ, ಅವನ ಮನಸ್ಸನ್ನು ರಮಿಸುತ್ತಿತ್ತು, ಹೃದಯವನ್ನು ತಣಿಸುತ್ತಿತ್ತು. ಈಗ ಅವನ ಮನಸ್ಸಿನ ತುಂಬ ಕತ್ತಲೆ ಕವಿದಂತೆ ಆಗಿಹೋಗಿತ್ತು ; ಏಕೆಂದರೆ, ಅವನ ಮನಸ್ಸಿನ ತುಂಬ ಅವನ ಹೆಂಡತಿಯ ಕರಿಯ ರೂಪೇ ತುಂಬಿಹೋಗಿತ್ತು. ಜಯಲಕ್ಷ್ಮಿ ಕಪ್ಪೇ: ನಾಗಪ್ಪನವರೇ ಅದನ್ನು ಮುಚ್ಚಿಡಲಾಗಲಿಲ್ಲ ಕೊನೆಗೆ, ಇನ್ನು ನಾನು ಮುಚ್ಚಿಡುವುದಕ್ಕಾಗುತ್ತದೆಯೆ ? ಜಯಲಕ್ಷ್ಮಿ ಕಪ್ಪು ಎಂಬ ಸಂಗತಿಯನ್ನು ಮೊದಲೇ ತಿಳಿಸದೆ ವಾಚಕರಿಗೆ ನಾನೇನೂ ಮೋಸ ಮಾಡಿಲ್ಲ ವೆಂದು ನನ್ನ ನಂಬಿಕೆ. ನಾರಾಯಣಮೂರ್ತಿಗೆ ಆ ಅಂಶ ಗೊತ್ತಾಗುವುದಕ್ಕೆ ಮುಂಚೆಯೇ ವಾಚಕರಿಗೆ ತಾನೆ ಏಕೆ ತಿಳಿಸಬೇಕು? ಇರಲಿ. ಅವಳ ಕಪ್ಪಿಗೆ ನಾರಾಯಣಮೂರ್ತಿಯ ಜುಗುಪ್ಸೆಗೊಂಡ ಮನಸ್ಸು ಇನ್ನಷ್ಟು ಕಪ್ಪು ಬಳಿದು ಅವನ ಮನಸ್ಸೆಲ್ಲ ಮಸೀಮಯವಾಗಿಬಿಟ್ಟಿತ್ತು. ನಾರಾಯಣಮೂರ್ತಿಗೆ ಜುಗುಪ್ಸೆ ಹುಟ್ಟಿದ್ದರಿಂದ ಅವಳ ಕಪ್ಪು ಅವನಿಗೆ ಅಸಹ್ಯ ಹುಟ್ಟಿಸಿತು ಅಷ್ಟೆ. ಅವಳದ್ದು ಅಸಹ್ಯ ಹುಟ್ಟಿಸುವಂಥ 'ನೀಗ್ರೊ' ಕಪ್ಪಾಗಿರಲಿಲ್ಲವೆಂದು ನಾನು ಇಲ್ಲಿ ಸೂಚಿಸದೆಹೋದರೆ ಜಯಲಕ್ಷ್ಮಿಗೆ ತೀರ ಅನ್ಯಾಯಮಾಡಿದಂತಾಗುತ್ತದೆ.

ನಾರಾಯಣಮೂರ್ತಿ ಮನಸ್ಸನ್ನು ಸಮಾಧಾನ ಸ್ಥಿತಿಗೆ ತಂದುಕೊಳ್ಳ ಬೇಕಾದರೆ ಬಹಳ ಕಾಲ ಹಿಡಿಯಿತು. ಎಷ್ಟೇ ಕಲಕಿಹೋಗಿದ್ದರೂ ಮನಸ್ಸು ಒಮ್ಮೆಯಲ್ಲ ಒಮ್ಮೆ ಸಮಾಧಾನ ಸ್ಥಿತಿಗೆ ಬಂದೇ ಬರಬೇಕು. ಕಲಕಿಹೋದ ಕಡಲೇ ಶಾಂತವಾಗುವುದು. ಮನಸ್ಸು ಸಮಾಧಾನಗೊಂಡಂತೆ ನಾರಾಯಣ ಮೂರ್ತಿ ತನಗೆ ಮದುವೆಯಾದ ವಿಚಾರ, ತನ್ನ ಕಪ್ಪು ಹೆಂಡತಿಯ ವಿಚಾರ, ಎಲ್ಲವನ್ನೂ ಮರೆಯುತ್ತ ಬಂದ. ಆದರೂ ತಿಂಗಳಿಗೊಮ್ಮೆ - ಮಾವನವರಿಂದ ಹಣ ಬಂದಾಗ - ಹೆಂಡತಿಯ ನೆನಪಾಗಿಬಿಡುತ್ತಿತ್ತು. ಮೊದಲ ತಿಂಗಳು ಮಾವ ನವರು ೧೫ ರೂಪಾಯಿ ಕಳಿಸಿದಾಗ ಹಣವನ್ನು ಮುಟ್ಟುವುದಿಲ್ಲವೆಂದು ಅವನು ಕೂಗಾಡಿದ. ತಾಯಿ, ಗೌರಿ ಬಲವಂತ ಮಾಡಿದಮೇಲೆ ತೆಗೆದು

ಕೊಂಡ. ನಾರಾಯಣಮೂರ್ತಿಗೂ ಹೀಗೆ ತೋರಿತು : 'ಹುಡುಗಿಯನ್ನು ಮದುವೆ ಮಾಡಿಕೊಂಡದ್ದಾಯಿತು. ನನ್ನ ಮಾವನವರಿಗೂ ಗಂಡುಮಕ್ಕಳಿಲ್ಲ. ಒಂದು ದೃಷ್ಟಿಯಲ್ಲಿ ಅವರ ಸರ್ವಸ್ವಕ್ಕೂ ನಾನೇ ಒಡೆಯ. ಅವರು ಕೊಟ್ಟ ೫೦೦ ರೂಪಾಯನ್ನು ತೆಗೆದುಕೊಂಡು ಬ್ಯಾಂಕಿನಲ್ಲಿ ಇಟ್ಟಿರುತ್ತೇನೆ. ಅಷ್ಟನ್ನು ತೆಗೆದುಕೊಂಡು, ಈಗ ಕಳಿಸುವ ಹಣ ಬೇಡ ಎನ್ನುವುದರಲ್ಲಿ ಅರ್ಥವೇನು ? ಮದುವೆ ಮಾಡಿಕೊಂಡದ್ದರಿಂದ ನನಗಂತೂ ಸುಖವಿಲ್ಲ. ನನ್ನ ತಾಯಿ ಅಕ್ಕನಾದರೂ ಸುಖವಾಗಿರಲಿ.'

ಎರಡನೆಯ ತಿಂಗಳು ೨೦ ರೂಪಾಯಿ ಕಳಿಸಿದರು ನಾಗಪ್ಪನವರು. ನಾರಾಯಣಮೂರ್ತಿ ಹಣ ತೆಗೆದುಕೊಂಡ ಕೂಡಲೆ ವೆಂಕಮ್ಮನವರು ನುಡಿದರು: "ನಾಣು, ಜಯಲಕ್ಷ್ಮಿ ನಿಜವಾಗಿಯೂ ನಿನ್ನ ಭಾಗ್ಯಲಕ್ಷ್ಮಿ. ದುಡ್ಡಿನ ಮುಖವನ್ನೇ ಕಾಣದಿದ್ದ ನಮಗೆ ಈಗ ದುಡ್ಡಿನ ದರ್ಶನ ಆಗುತ್ತಿದೆ. ಈಸಲ ನಿನಗೆ ಪ್ಯಾಸಾಗುತ್ತೆ ನಾಣು, ಜಯಲಕ್ಷ್ಮಿ ನಿನಗೆ ಜಯಾನೂ ತರುತಾಳೆ."

"ಅಮ್ಮ, ನೀನು ಸುಮ್ಮನೆ ಆ ಕರೀ ಭೂತನ ಜ್ಞಾಪಕ ತರಬೇಡ" ಎಂದು ರೇಗಿ ನುಡಿದ ಅವನು.

## ೧೨

## ವಿದ್ಯೆ ಕೊನೆಮುಟ್ಟಿತು

ವೆಂಕಮ್ಮನವರು ನಾರಾಯಣಮೂರ್ತಿಯನ್ನು ಶಾಲೆಗೆ ಸೇರಿಕೊಳ್ಳಬೇಕೆಂದು ಬಹಳ ಬಲವಂತ ಮಾಡಿದರು. ಅದಕ್ಕೆ ನಾರಾಯಣಮೂರ್ತಿ ಎಂದ :

"ಅಮ್ಮ, ನಾನೂ ಸ್ಕೂಲಿಗೆ ಸೇರಿಕೊಂಡರೆ ಫೀಜು ಕೊಡಬೇಕಾಗುತ್ತೆ. ಈಗ ಮದುವೆ ಬೇರೆ ಆಗಿದೆ ; ಮಾವನವರು ದುಡ್ಡು ಬೇರೆ ಕಳಿಸುತ್ತಾರೆ ಅಂತ ಎಲ್ಲರಿಗೂ ಗೊತ್ತು. ನಾನು ಭಿಕ್ಷಾನ್ನಕ್ಕೆ ಹೋಗುವುದು ಚೆನ್ನಾಗಿರುವುದಿಲ್ಲ. ನನಗೆ ಬರುವ ಇಪ್ಪತ್ತು ರೂಪಾಯಲ್ಲಿ ನನಗೆ ಐದು ರೂಪಾಯಿ ಸಾಕು. ಇನ್ನು ಹದಿನೈದು ರೂಪಾಯಲ್ಲಿ ಇನ್ನುಮೇಲೆ ಸ್ವಲ್ಪ ಮಾನವಾಗಿ ಸಂಸಾರ ಮಾಡೋಣ. ಈ ವರ್ಷ ಮನೆಯಲ್ಲೇ ಕಷ್ಟಪಟ್ಟು ಚೆನ್ನಾಗಿ ಓದುತ್ತೇನೆ.

ಪ್ಯಾಸಾದರೆ ಮುಂದಿನ ವರ್ಷ ಸ್ಕಾಲರ್‌ಷಿಪ್ಪು ಸಿಕ್ಕಿದರೂ ಸಿಕ್ಕಬಹುದು. ಎಫ್.ಎ. ಪ್ಯಾಸಾದರೆ ಎಲ್ಲಿಯಾದರೂ ಕೆಲಸಕ್ಕೆ ಸೇರುತ್ತೇನೆ. ಆಮೇಲೆ ಸುಖವಾಗಿರಬಹುದು."

"ನಿನ್ನ ಇಷ್ಟವಿದ್ದಂತೆ ಆಗಲಪ್ಪ" ಎಂದರು ವೆಂಕಮ್ಮನವರು.

ನಾರಾಯಣಮೂರ್ತಿ ಬಹಳ ಕಷ್ಟಪಟ್ಟು ತನ್ನ ಹೆಂಡತಿಯ ಮೇಲಿದ್ದ ಜುಗುಪ್ಸೆ ಮತ್ತು ರೋಷದ ಭಾವನೆಯನ್ನು ಅದುಮಿಕೊಂಡ. ಹಾಗೆ ಮಾಡಿಕೊಳ್ಳದೆ ಹೋಗಿದ್ದರೆ ಅವನಿಗೆ ವ್ಯಾಸಂಗ ಮಾಡುವುದಕ್ಕೆ ಮನಸ್ಸು ಸಮಾಧಾನವೇ ಇರುತ್ತಿರಲಿಲ್ಲ. ಬಹಳ ಕಷ್ಟಪಟ್ಟು, ಓದಿನಲ್ಲಿ ಮನಸ್ಸಿಟ್ಟು ವ್ಯಾಸಂಗ ಮಾಡುತ್ತಿದ್ದ.

ಅವನು ನಿರೀಕ್ಷಿಸಿದ್ದಂತೆ ಅವನಿಗೆ ಪ್ಯಾಸಾಯಿತು; ಮೊದಲನೆಯ ದರ್ಜೆಯಲ್ಲೇ ಆಯಿತು.

"ನಾನು ಹೇಳಲಿಲ್ಲವೇ ನಾಣು, ಹುಡುಗಿ ಕಪ್ಪಾದರೇನು, ಲಕ್ಷಣವಂತೆ. ನಿನ್ನ ಮದುವೆಯಾಯಿತು ನೋಡು, ನಮ್ಮ ಎಲ್ಲ ಕಷ್ಟಗಳೂ ನೀಗಿಕೊಂಡುವು. ಅವಳು ನಿನ್ನ ಭಾಗ್ಯಲಕ್ಷ್ಮಿ ಕಣೋ ಮಗೂ."

"ಅಮ್ಮ, ಅವಳಲ್ಲ ನನ್ನ ಭಾಗ್ಯಲಕ್ಷ್ಮಿ. ನನ್ನ ಭಾಗ್ಯಲಕ್ಷ್ಮಿ ಇಲ್ಲಿದ್ದಾಳೆ" ಎಂದು ತನ್ನ ಹಣೆಯನ್ನು ತೋರಿ ಆರ್ಭಟಿಸಿದ ನಾಣು.

ನಾರಾಯಣಮೂರ್ತಿಯ ವ್ಯಾಸಂಗ ಹೀಗೆಯೇ ಸಾಗಿತು. ಅವನಿಗೆ ಶಾಲೆಯಲ್ಲಿ ಸ್ಕಾಲರ್‌ಷಿಪ್ಪೂ ಸಿಕ್ಕಿತ್ತು. ಮಾವನವರೂ ತಿಂಗಳು ತಿಂಗಳೂ ತಪ್ಪದೆ ಹಣ ಕಳಿಸಿಕೊಡುತ್ತಿದ್ದರು. ಸಂಸಾರ ಸುಖವಾಗಿ ಸಾಗುತ್ತಿತ್ತು.

ನಾರಾಯಣಮೂರ್ತಿಗೆ ಎಫ್.ಎ. ಪರೀಕ್ಷೆಯಲ್ಲೂ ತೇರ್ಗಡೆಯಾಯಿತು. ತನಗೆ ತೇರ್ಗಡೆಯಾಗಿದೆಯೆಂದೂ, ಇನ್ನು ಮುಂದೆ ತಾನು ಓದುವುದಿಲ್ಲವೆಂದೂ, ಎಲ್ಲಿಯಾದರೂ ಕೆಲಸಕ್ಕೆ ಸೇರಬೇಕೆಂದು ಮಾಡಿಕೊಂಡಿರುವುದಾಗಿಯೂ, ಆದ್ದರಿಂದ ಇನ್ನು ಮುಂದೆ ಅವರು ಹಣ ಕಳಿಸಬೇಕಾದ್ದಿಲ್ಲವೆಂದೂ ನಾರಾಯಣಮೂರ್ತಿ ಮಾವನವರಿಗೆ ಕಾಗದ ಬರೆದು ಹಾಕಿದ. ಅವರು ತಮ್ಮ ಸಂತೋಷವನ್ನು ಸೂಚಿಸಿ ಉತ್ತರ ಬರೆದರು.

ನಾರಾಯಣಮೂರ್ತಿಯ ವಿದ್ಯೆ ಕೊನೆಮುಟ್ಟಿತು. ಅವನು ಆಗಿನ ಕಾಲಕ್ಕೆ ವಿದ್ಯಾವಂತನೇ ಆಗಿದ್ದನೆನ್ನಬೇಕು ಅವನಿಗೆ ಬೇಗನೇ ಕೆಲಸ

ದೊರೆಯುವುದರಲ್ಲಿ ಸಂದೇಹವಿರಲಿಲ್ಲ. ಆದರೂ, ಸಿಕ್ಕುವವರೆಗೆ ಕಷ್ಟಪಡಬೇಕಾಗಿತ್ತು. ಇದುವರೆಗೂ ಮಾವನವರು ಕಳಿಸುತ್ತಿದ್ದ ಹಣದಿಂದ ಸಂಸಾರ ನಿರ್ವಹಿಸುತ್ತಿದ್ದ. ಇನ್ನು ಮುಂದೆ ಏನು ಮಾಡಬೇಕೆಂಬ ಯೋಚನೆಗಿಟ್ಟು ಕೊಂಡಿತು ಅವನಿಗೆ. ವೆಂಕಮ್ಮನವರು ಮಗ ಬೇಡ ಎಂದರೂ ಕಳ್ಳತನದಿಂದ ಅಲ್ಲಿ ಇಲ್ಲಿ ಕೂಲಿ ಮಾಡುತ್ತಿದ್ದರು. ಅದರಿಂದ ಬಂದ ದುಡ್ಡನ್ನೂ ಮಗ ಕೊಡುತ್ತಿದ್ದ ಹಣದಲ್ಲಿ ಏನಾದರೂ ಸ್ವಲ್ಪ ಮಿಕ್ಕರೆ ಅದನ್ನೂ ಕೂಡಿಸಿ ಇಟ್ಟಿದ್ದರು. ಅದರಿಂದ ಎರಡು ಮೂರು ತಿಂಗಳುಗಳಾದರೂ ಸಂಸಾರ ಮಾಡಬಹುದಾಗಿತ್ತು.

ಹಾಗೆ ಎರಡು ಮೂರು ತಿಂಗಳು ಸಂಸಾರ ನಡಸಿದ್ದಾಯಿತು. ನಾರಾಯಣಮೂರ್ತಿಗೆ ಯಾವ ಕೆಲಸವೂ ಇನ್ನೂ ಸಿಕ್ಕಿರಲಿಲ್ಲ. ಎರಡು ಮೂರು ವೇಳೆ ಪಟ್ಟ ಪ್ರಯತ್ನಗಳು ನಿಷ್ಫಲವಾಗಿದ್ದುವು.

"ಅಮ್ಮ, ಐನೂರು ರೂಪಾಯಿಯಲ್ಲಿ ಒಂದು ಐವತ್ತು ರೂಪಾಯಿ ತೆಗೆದಿರುತ್ತೇನೆ. ಇಲ್ಲವೆ ಹೋದರೆ ಯತ್ನವೇ ಇಲ್ಲ. ನಿನ್ನೆ ಶೇಷು ಹೇಳಿದ, ತಾಲ್ಲೂಕು ಕಚೇರಿಯಲ್ಲಿ ಒಂದು ಕೆಲಸ ಖಾಲಿ ಇದೆಯಂತೆ. ಅರ್ಜಿ ಹಾಕುತ್ತೇನೆ. ಸದ್ಯದಲ್ಲೇ ಕೆಲಸ ಸಿಕ್ಕಬಹುದು" ಎಂದು ನಾರಾಯಣ ಮೂರ್ತಿ ತಾಯಿಯನ್ನು ಕೇಳಿದ.

ವೆಂಕಮ್ಮನವರು ಖಂಡಿತ ಹಣ ತೆಗೆಯಕೂಡದು ಎಂದರು. ನಾರಾಯಣಮೂರ್ತಿ ಸುಮ್ಮನಾದ. ತನ್ನ ತಾಯಿ ತನಗಾಗಿ ಎಷ್ಟೋ ಕಷ್ಟ ಪಟ್ಟಿದ್ದಾರೆ, ಅವರ ಕಷ್ಟ ಎಂದಿಗೆ ನಿಲ್ಲುತ್ತದೋ, ತಾನು ಅವರನ್ನು ಎಂದು ಸುಖವಾಗಿ ಇರಿಸೇನೋ ಎಂದು ಅವನ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಅವನ ಮನಸ್ಸಿಗೆ ನೆಮ್ಮದಿಯೇ ಇರಲಿಲ್ಲ.

ಹೀಗಿರಲು, ಇದ್ದಕ್ಕಿದ್ದಂತೆಯೇ ಒಂದು ದಿನ ನಾಗಪ್ಪನವರು ಬಂದರು. ಎಲ್ಲರಿಗೂ ಆಶ್ಚರ್ಯವಾಯಿತು. ನಾಗಪ್ಪನವರು ಕುಳಿತು, ಕ್ಷೇಮ ಸಮಾಚಾರದ ಮಾತುಕತೆಯಾದ ಮೇಲೆ –

"ನಾರಾಯಣಮೂರ್ತಿ, ನಿನ್ನ ಜಮೀನಿನ ಎರಡು ವರ್ಷದ ಫಸಲಿನ ದುಡ್ಡು ನನ್ನಲ್ಲಿಯೇ ಇದೆ...." ಎಂದು ನಾಗಪ್ಪನವರು ಹೇಳುವಷ್ಟರಲ್ಲಿಯೇ "ನನ್ನ ಜಮೀನು ಯಾವುದು?" ಎಂದು ಕೇಳಿದ ನಾರಾಯಮೂರ್ತಿ. ಪಾಪ,

ಮಾವನವರು ತನಗೆ ಜಮೀನು ಧಾರೆಯೆರೆದು ಕೊಟ್ಟಿದ್ದದ್ದೆ ಮರೆತುಹೋಗಿತ್ತು ಅವನಿಗೆ; ಅವನ ತಾಯಿಗಾಗಲಿ, ಗೌರಿಗಾಗಲಿ ಕೂಡ ಈ ವಿಷಯ ನೆನಪಿಗೆ ಬರಲಿಲ್ಲ.

"ಹಣ ತೆಗೆದುಕೊ" ಎಂದು ಒಂದು ಚೀಲದ ತುಂಬ ರೂಪಾಯಿ ಕೊಟ್ಟರು. ನಾರಾಯಣಮೂರ್ತಿಗೆ ಒಳಗೊಳಗೇ ಅಪಾರ ಆನಂದ ವಾಯಿತು; ಬಿಗುಮಾನದಿಂದ ವ್ಯಕ್ತಪಡಿಸಲಿಲ್ಲ. ವೆಂಕಮ್ಮನವರೇನೋ ತಮ್ಮ ಸಂತೋಷವನ್ನು ತಡೆದುಕೊಳ್ಳಲಾರದೆ ಬಾಯಿ ಬಾಯಿ ಬಿಡುತ್ತಿದ್ದರು.

"ಆಮೇಲೆ, ಇದೋ . . . ವೆಂಕಮ್ಮನವರೇ . . . ಮಂಗಳದ್ರವ್ಯ ತಂದಿರುತ್ತೇನೆ . . . ನಾರಾಯಣಮೂರ್ತಿಗೆ . . ." ಎಂದು ಹೇಳುತ್ತ ಗಂಟು ಬಿಚ್ಚಲು ಮೊದಲು ಮಾಡಿದರು. ಗೌರಿ ಒಂದು ತಟ್ಟೆ ತಂದು ಅವರ ಮುಂದೆ ಇಟ್ಟಳು.

"ಜಯ ದೊಡ್ಡವಳಾದಳೇನೂ!" ಎಂದು ವೆಂಕಮ್ಮನವರು ಬಿಟ್ಟ ಬಾಯಲ್ಲೇ ಕೇಳಿದರು.

"ತಾವು ಯಾವಾಗ ದೊಡ್ಡ ಮನಸ್ಸು ಮಾಡಿ ಸೊಸೆಯನ್ನು ಮನೆಗೆ ಕರಸಿಕೊಳ್ಳುತ್ತೀರೋ ಆವಾಗ ಕಳಿಸಿಕೊಡಲು ಸಿದ್ಧನಾಗಿದ್ದೇನೆ. ಈಗಲೇ ಆಗಿಹೋಗಲಿ . . . ಅಂತ . . . ನನ್ನ ಮನಸ್ಸು . . . ತಮಗೂ ನೆರವಿಗೆ ಆಗುತ್ತಾಳೆ. ಆದರೆ ನನ್ನದೇನೂ ಬಲವಂತವಿಲ್ಲ. ತಮ್ಮ ಅನುಕೂಲ ಇದ್ದ ಹಾಗೆ ಮಾಡಬಹುದು. ತಮ್ಮ ಇಷ್ಟದ ಪ್ರಕಾರ ನಡೆದುಕೊಳ್ಳಲು ಸಿದ್ಧ ನಾಗಿದ್ದೇನೆ."

"ಬಹಳ ಸಂತೋಷ . . . ಆಗಬಹುದು . . . ಏನಪ್ಪ ನಾಣು?" ಎಂದು ನಾಣಪ್ಪನ ಕಡೆ ತಿರುಗಿ ನೋಡಿದರು ವೆಂಕಮ್ಮನವರು.

ನಾಣು ಮೌನವಾಗಿದ್ದ. ಹಣದ ಸಂದರ್ಶನದಿಂದ ಉಂಟಾಗಿದ್ದ ಆನಂದ ಇಂಗಿಹೋಯಿತು. ಕ್ರೋಧ ಹೊಗೆಯಾಡಲು ಮೊದಲಾಯಿತು. ಕ್ರೋಧ ಯಾರಮೇಲೆ? ತನಗೆ ಕಪ್ಪು ಹೆಣ್ಣನ್ನು ಗಂಟುಹಾಕಿದ ಸುಬ್ಬಯ್ಯ ಮಾವಯ್ಯನ ಮೇಲೇ, ತನ್ನ ಮಾವನವರ ಮೇಲೇ? ಅಲ್ಲ. ಅವರುಗಳಲ್ಲಿ ಯಾರಮೇಲೆ ಕೋಪಗೊಂಡಿದ್ದರೂ ಅದು ನ್ಯಾಯವಾಗಿಯೇ ಇತ್ತು. ಅವನು ಈಗ ಕೋಪಗೊಂಡದ್ದು ತನ್ನ ಹೆಂಡತಿಯ ಮೇಲೆ, ನಿರಪರಾಧಿಯಾದ ಹೆಣ್ಣಿನ ಮೇಲೆ. ಆಗ ಅವನಿಗೆ ಈ ನ್ಯಾಯಾನ್ಯಾಯಗಳು ತೋರಲಿಲ್ಲ. ತಾನು

ಯಾರ ಜೊತೆಯಲ್ಲಿ ಇನ್ನು ಮುಂದೆ ಬಾಳು ನೂಕಬೇಕೋ, ಆದರೆ ಯಾರು ತನಗೆ ಅಸಹ್ಯ ಹುಟ್ಟಿಸುವಂತಿದ್ದಳೋ, ಆ ವ್ಯಕ್ತಿಯ ಮೇಲೆ ಅವನು ಕೋಪ ಗೊಂಡದ್ದು ಆ ವೇಳೆಯಲ್ಲಿ ಅಷ್ಟಾಗಿ ಅಸ್ವಾಭಾವಿಕವೂ ಆಗಿರಲಿಲ್ಲ. ಕ್ರೋಧದ ಆವೇಶದಲ್ಲಿ ಅವನಿಗೊಂದು ಕ್ರೂರ ಆಲೋಚನೆ ಹೊಳೆಯಿತು: ಅವಳನ್ನು ಕರಸಿಕೊಳ್ಳಬೇಕು ತಾನೆ ಏಕೆ? ಅವಳೊಡನೆ ತಾನು ಬಾಳಬೇಕು ಏಕೆ? ಅವಳಿಗೇನು ಕೊರತೆ? ಅವಳ ತಂದೆಯ ಕಾಸೊಂದನ್ನೂ ತಾನು ಮುಟ್ಟು ವುದಿಲ್ಲ. ಈಗ ಕೊಟ್ಟಿರುವ ಹಣವನ್ನೂ ಜಮೀನನ್ನೂ ಎಲ್ಲವನ್ನೂ ಅವರಿಗೆ ಹಿಂದಿರುಗಿಸಿಬಿಟ್ಟರಾಯಿತು. ಎಲ್ಲವೂ ಅವರ ಮಗಳಿಗೆ ಇದ್ದುಕೊಳ್ಳಲಿ. ಅದೃಷ್ಟವಿದ್ದರೆ, ಹಣೆಯಲ್ಲಿ ಬರೆದಿದ್ದರೆ, ಮತ್ತೆ ಯಾರಾದರೂ ಹೆಣ್ಣು ಕೊಡಲು ಬಂದರೆ, ತಾನು ಬೇರೆಯ ಮದುವೆ ಮಾಡಿಕೊಂಡರಾಯಿತು . . . ಆದರೆ ಇಷ್ಟೆಲ್ಲ ಭಾವಕ್ಕೆ ಮಾತು ಕೊಡಲು ಅವನ ನಾಲಗೆ ಅಲುಗದಂತೆ ಆಗಿ ಹೋಗಿತ್ತು. ಅವನ ದೀರ್ಘ ಮೌನದಿಂದಲೂ, ಕೆಂಪೇರಿದ್ದ ಕಣ್ಣು ಗಳಿಂದಲೂ ಅವನ ಮನಸ್ಸಿನಲ್ಲಿ ಏನೋ ಅಸಮಾಧಾನವಿದೆಯೆಂಬುದು ನಾಗಪ್ಪನವರ ಅರಿವಿಗೆ ಬಂತು. ತಮ್ಮ ಮಗಳಿನ ಮೇಲೆ ನಾರಾಯಣ ಮೂರ್ತಿಗೆ ಮೊದಲಿಂದಲೂ ವಿಶ್ವಾಸವಿಲ್ಲವೆಂಬ ಸಂಗತಿಯೂ ಅವರಿಗೆ ಹೊಳೆ ಯದೆ ಇರಲಿಲ್ಲ. ತಾವು ನಾರಾಯಣಮೂರ್ತಿಗೆ 'ಮೋಸ' ಮಾಡಿದ್ದು ಅಂಥ ದೊಡ್ಡ ಅಪರಾಧವಾಗಿ ಅವರು ಎಣಿಸಿಕೊಂಡಿರಲಿಲ್ಲ. ತಮಗೆ ಇಷ್ಟವಿಲ್ಲದಿದ್ದರೂ, ಅವರು ನಾರಾಯಣಮೂರ್ತಿಗಲ್ಲದಿದ್ದರೆ ಯಾರಿಗಾದರೂ ಒಬ್ಬರಿಗೆ ಇದೇ ರೀತಿಯಲ್ಲಿಯೇ ತಮ್ಮ ಮಗಳನ್ನು ಮದುವೆ ಮಾಡಿಕೊಡಲೇ ಬೇಕಾಗಿತ್ತು. ಯಾರಿಗಾದರೂ ಇದೇ ರೀತಿಯಲ್ಲಿ, ಅಥವಾ ಇನ್ನೊಂದು ರೀತಿಯಲ್ಲಿ, 'ಮೋಸ' ಮಾಡಲೇ ಬೇಕಾಗಿತ್ತು. 'ಸಾವಿರ ಸುಳ್ಳು ಹೇಳಿ ಯಾದರೂ ಕನ್ಯಾದಾನ ಮಾಡು'ವುದು ಅವರ ಕರ್ತವ್ಯವಾಗಿತ್ತು. ತಮ್ಮ ಕರ್ತವ್ಯ ಪರಿಪಾಲನೆ ಮಾಡಿದ್ದರು ಅಷ್ಟೆ. ಅಲ್ಲದೆ, ಕಡುಬಡವನಾಗಿದ್ದ ನಾರಾಯಣಮೂರ್ತಿಯನ್ನು ಮೇಲಕ್ಕೆತ್ತಲು ಸಹಾಯ ಮಾಡಿದ್ದರು, ಇನ್ನೂ ಮಾಡುವವರಾಗಿದ್ದರು. ಎಂದಿದ್ದರೂ, ಹಣದ ಆಸೆಯಮೇಲಿಂದಲಾದರೂ ನಾರಾಯಣಮೂರ್ತಿ ತಮ್ಮ ದಾರಿಗೆ ಬಂದೇ ಬರುತ್ತಾನೆ, ಸದ್ಯಕ್ಕೆ ಅವನನ್ನು ಬಲವಂತ ಮಾಡಿ ಪ್ರಯೋಜನವಿಲ್ಲ – ಎಂದು ಅವರೆಣಿಸಿದ್ದರು.

ಮೌನವನ್ನು ಬಿಟ್ಟು ನಾರಾಯಣಮೂರ್ತಿ ಹೇಳಿದ: "ನನಗೆ ಸದ್ಯಕ್ಕೆ ಈ ಹಣ ಬೇಕಾಗಿಲ್ಲ. ನಿಮ್ಮ ಮಗಳಿಗೆ ಕೊಟ್ಟ ಜಮೀನಿನ ಹಣ ಅವಳಿಗೆ ಸೇರಬೇಕಾದ್ದು. ಅವಳಿಗೇ ಕೊಟ್ಟುಬಿಡಿ. ಸದ್ಯಕ್ಕೆ ಅವಳನ್ನು ಕರಸಿಕೊಳ್ಳುವ ಸ್ಥಿತಿಯಲ್ಲಿ ನಾವಿಲ್ಲ."

"ಅದಕ್ಕೇ ಅಪ್ಪ, ನಾನು ಹೇಳಿದ್ದು. ಈ ಹಣ ಬೇಕಾಗುತ್ತೆ – ಅವಳದ್ದೇನು ನಿನ್ನದೇನು. ಸಂಕೋಚವೇಕೆ? ನಾಳೆಯ ದಿನ ನಿನ್ನ ಹೆಸರಿನಲ್ಲಿ ನಾನೇ ಬ್ಯಾಂಕಿನಲ್ಲಿ ಇಟ್ಟುಬಿಡುತ್ತೇನೆ. ಏನು, ವೆಂಕಮ್ಮನವರೇ?... ನಿಮ್ಮ ಮಕ್ಕಳು..."

ವೆಂಕಮ್ಮನವರು ನಸುವೆ ನುಡಿದರು: "ಇನ್ನೇನೂ ಇಲ್ಲ. ಅವನಿಗೆ ಇನ್ನೂ ಕೆಲಸ ಸಿಕ್ಕಿಲ್ಲ ನೋಡಿ. ಅದಕ್ಕೆ ಮನಸ್ಸಿಗೆ ಸ್ವಲ್ಪ ಕೊರಗಾಗಿದೆ ಅಷ್ಟೆ. ಅವನಿಗೆ ಕೆಲಸ ಸಿಕ್ಕಿದ ಮೇಲೆ ನೋಡೋಣವಂತೆ."

"ಹಾಗೆಯೇ ಆಗಲಿ" ಎಂದು ನಾಗಪ್ಪನವರು ಒಪ್ಪಿಕೊಂಡರು.

## ೧೩

## ಕೈ ಹಿಡಿದ ಹುಡುಗಿಯ ಪುಣ್ಯ

ನಾಗಪ್ಪನವರು ಹೊರಟುಹೋದ ಮೇಲೆ ವೆಂಕಮ್ಮನವರು ಮಗನನ್ನು ಕುರಿತೆಂದರು: "ನಾಣೂ, ಏಕೆ ಒಲ್ಲೆ ಅಂದೆ. ಪ್ರಸ್ತ ಮಾಡಿಕೊಂಡು ಬಿಡಪ್ಪ. ಜಯ ಸಾಮಾನ್ಯದ ಹುಡುಗಿಯಲ್ಲ ಮಗು. ನೀನು ಬೇಡ ಬೇಡ ಎನ್ನುತ್ತಿದ್ದೀಯೆ ಹೊರತು, ನಾಗಪ್ಪನವರು ಈ ಕ್ಷಣದಲ್ಲಿ ನಿನ್ನನ್ನು ಉದ್ಧಾರ ಮಾಡಿಬಿಡುತ್ತಾರೆ. ಆ ಹುಡುಗಿ ನಮ್ಮ ಮನೆಗೆ ಕಾಲಿಟ್ಟರೆ ಸಾಕು ನೋಡು ನಾಣು, ಆ ಭಾಗ್ಯಲಕ್ಷ್ಮಿಯ ಮುಂದೆ ನಮ್ಮ ದರಿದ್ರ ಲಕ್ಷ್ಮಿ ಓಡಿ ಹೊರಟು ಹೋಗುತ್ತಾಳೆ."

ನಾಣುವಿಗೆ ಕೋಪ ಬಂತು: "ಅಮ್ಮಾ, ನಿನಗೆಲ್ಲೋ ಹಣದ ಹುಚ್ಚು ಹಿಡಿದುಬಿಟ್ಟಿದೆ. ನನಗೆ ಭಾಗ್ಯವೂ ಬೇಡ, ಆ ಭಾಗ್ಯಲಕ್ಷ್ಮಿಯೂ ಬೇಡ. ಆ ಹುಡುಗಿಯನ್ನು ನೀನು ಮೋಹಿಸಿರಬಹುದು, ಅದರ ಮುಖ – ಆ ಕಪ್ಪು ಓಡಿನ ಮುಖ ನೆನಸಿಕೊಂಡರೆ ನನಗೆ ಮೈಯೆಲ್ಲ ಉರಿಯುತ್ತೆ. ಮುಖ್ಯ

ನಾನು ಧಾರೆಯೆರಸಿಕೊಳ್ಳಬಾರದಾಗಿತ್ತು. ಆದದ್ದು ಆಗಿಹೋಯಿತು. ಇನ್ನು ಆ ಮಂಗಮೂತಿಯ ದರ್ಶನ ಮಾಡುವುದಿಲ್ಲ ಕಣಮ್ಮ."

"ಹಾಗಂದರೆ ಹೇಗೋ ಮಗು. ನೀನು ಕೈ ಹಿಡಿದ ಹುಡುಗಿಯನ್ನ ನೀನು ಮನೆಗೆ ಕರೆದುಕೊಳ್ಳದೆಹೋದರೆ ಯಾರಪ್ಪ ಕರೆದುಕೊಳ್ಳುತ್ತಾರೆ. ರೂಪು ಮುಖ್ಯವಲ್ಲ ಕಣೋ . . ."

"ಅಮ್ಮಾ, ಇನ್ನು ಈ ವಿಚಾರ ಮಾತಾಡಬೇಡ. ಸದ್ಯಕ್ಕೆ ಕಾಟ ತಪ್ಪಿದೆ. ಮುಂದೆ ಅದರ ಯೋಚನೆ."

ಹೀಗೇ ಮಾತಾಡುತ್ತಿರುವಾಗ ಅಂಚೆಯವನು ಕಾಗದ ತಂದು ಕೊಟ್ಟು ಹೋದ. ನಾರಾಯಣಮೂರ್ತಿ ಅದನ್ನು ಬಿಚ್ಚಿ ಓದಿಕೊಂಡ. ಮತ್ತೆ ಮತ್ತೆ ಓದಿಕೊಂಡ. ಅವನ ಮುಖ ಅರಳಿತು.

"ಅಮ್ಮಾ, ತಾಲ್ಲೂಕು ಕಚೇರಿಯಲ್ಲಿ ಕೆಲಸ ಸಿಕ್ಕಿದೆ ಕಣಮ್ಮ! ತಿಂಗಳಿಗೆ ಇಪ್ಪತ್ತೈದು ರೂಪಾಯಿ! ಅಮ್ಮಾ! ಗೌರೀ, ಗೌರೀ!"

ಇಬ್ಬರೂ ಅಲ್ಲಿಯೇ ಇದ್ದರು. ಅವನು ಅಷ್ಟೊಂದು ಕೂಗಿಕೊಳ್ಳ ಬೇಕಾಗಿಯೇ ಇರಲಿಲ್ಲ. ವೆಂಕಮ್ಮನವರು ಮಗನ ಕೂಡ ಇನ್ನು ವಾದಿಸಿ ಪ್ರಯೋಜನವಿಲ್ಲವೆಂದುಕೊಂಡು ಹಾಗೆಯೇ ಚಾಪೆಯ ಮೇಲೆ ತಲೆ ಊರಿದ್ದರು; ಗೌರಿ ಯಾವುದೋ ಪುಸ್ತಕ ಓದುತ್ತಿದ್ದಳು.

ವೆಂಕಮ್ಮನವರು ಎದ್ದು ಬಂದು ಮಗನ ತಲೆ ನೇವರಿಸಿದರು; ನಾರಾಯಣಮೂರ್ತಿ ತಾಯಿಗೆ ನಮಸ್ಕಾರ ಮಾಡಿದ. "ಆಯುಷ್ಮಂತನಾಗಿ, ಐಶ್ವರ್ಯವಂತನಾಗಿ, ಹತ್ತು ಮಕ್ಕಳ ತಂದೆಯಾಗಿ ಬಾಳಪ್ಪ" ಎಂದು ಬಾಯಿ ತುಂಬ ಹರಸಿದರು.

"ನೋಡು ಮಗೂ, ಇವತ್ತು ಬೆಳಗ್ಗೆ ತಾನೆ ನಿಮ್ಮ ಮಾವನವರು ಮಂಗಳ ದ್ರವ್ಯ ತಂದು ಕೊಟ್ಟುಹೋದರು. ಇದು ನಿನ್ನ ಕೈ ಹಿಡಿದ ಹುಡುಗಿಯ ಪುಣ್ಯ ಅಲ್ಲದೆ ಇನ್ನೇನೂ ಅಂತ ತಿಳಿದಿದ್ದಿ? ಹಟ ಮಾಡಬೇಡ ನಾಣಿ. ಪ್ರಸ್ತ ಮಾಡಿಕೊಂಡುಬಿಡು. ಹದಿನಾರನೆಯ ದಿನಕ್ಕೇ ಆಗಿಹೋಗಲಿ. ಈಗೇನಪ್ಪ, ಕೆಲಸವೂ ಸಿಕ್ಕಂತಾಯಿತೆ? ನಾಗಪ್ಪನವರ ಹಂಗೂ ಬೇಡ. ನಿನ್ನ ಸಂಬಳದಲ್ಲಿ ನೀನು ಅಂಬಲಿಯೋ ಗಂಜಿಯೊ ಕುಡಿದುಕೊಂಡು ಹುಡುಗಿಯೊಡನೆ ಸಂಸಾರ ಮಾಡಿಕೊಂಡಿರು . . ."

ಗೌರಿ ನಡುವೆ ಮಾತಾಡಿದಳು : "ಅಮ್ಮ, ಪ್ರಸ್ತದ ವಿಚಾರ ಸದ್ಯಕ್ಕೆ ಇರಲಿ. ಅವನಿಗೆ ಇನ್ನೂ ಈಗ ತಾನೆ ಕೆಲಸ ಸಿಕ್ಕಿದೆ. ಪ್ರಸ್ತ ಮಾಡಿಕೊಂಡರೆ ಆ ಹುಡುಗಿಯನ್ನ ಈ ಕೋಣೆಗೆ ಕರೆದುಕೊಂಡು ಬರುವುದಕ್ಕೆ ಆಗುತ್ತದೆಯೇ? ಒಂದು ಬೇರೆ ಮನೆ ಮಾಡಬೇಕೋ ಇಲ್ಲವೋ? ನಾಣು, ನೀನು ಸುಮ್ಮನೆ ಈಗ ಯಾವ ಯೋಚನೆಯನ್ನೂ ಮಾಡಬೇಡ. ಮೊದಲು ಕೆಲಸಕ್ಕೆ ಸೇರಿಕೊ."

ನಾರಾಯಣಮೂರ್ತಿ ಕೆಲಸಕ್ಕೆ ಸೇರಿಕೊಂಡಾಯಿತು. ಎರಡು ಮೂರು ತಿಂಗಳಾಗುತ್ತಲೆ ಒಂದು ಸಣ್ಣ ಮನೆಯನ್ನು ಬಾಡಿಗೆ ತೆಗೆದುಕೊಂಡ. ಅದು ಶ್ರೀರಾಮಪೇಟೆಯಲ್ಲಿತ್ತು. ಮನೆ ಬಹಳ ಚಿಕ್ಕದು. ತೀರ ಹಳೆಯ ಕಾಲದ್ದು; ಅಲ್ಲಲ್ಲಿ ಶಿಥಿಲವಾಗಿಹೋಗಿತ್ತು; ಒಂದು ಸಣ್ಣ ಹಜಾರ; ಹಜಾರದ ಎಡಪಕ್ಕದಲ್ಲಿ ಒಂದು ಕೋಣೆ; ಹಜಾರದ ಮೇಲೆ ಮಹಡಿ ಎಂದು ಹೇಳಬಹುದಾಗಿದ್ದ ಅಟ್ಟ; ಮತ್ತೆ ಕೆಳಗೆ ಅಡುಗೆ ಮನೆ, ನಡುವೆ, ಬಚ್ಚಲ ಮನೆ– ಇಷ್ಟು. ವೆಂಕಮ್ಮನವರಿಗೆ ಇದೇ ಅರಮನೆಯಾಗಿತ್ತು. ತಾವು ಹಿಂದೆ ಯಾರ ಯಾರ ಮನೆಯಲ್ಲಿ ಕೂಲಿ ಮಾಡುತ್ತಿದ್ದರೋ ಅಲ್ಲಿಗೆಲ್ಲ ಎಂದಾದರೂ ಬಿಡುವಾದಾಗ ಒಮ್ಮೆ ಹೋಗಿ ತಮ್ಮ ಮಗನಿಗೆ ಕೆಲಸ ಸಿಕ್ಕಿ ಮನೆ ಮಾಡಿದ್ದ ಸಂಗತಿಯನ್ನು ತಿಳಿಸುತ್ತಿದ್ದರು. ಇತ್ತ ನಾರಾಯಣ ಮೂರ್ತಿಗೂ ಗೌರಿಗೂ ಸಹ ಮನೆಯ ವಿಷಯದಲ್ಲಿ ತೃಪ್ತಿಯೇ ಇತ್ತು. ನಾರಾಯಣಮೂರ್ತಿ ಅಟ್ಟವನ್ನು ತನ್ನ ಉಪಯೋಗಕ್ಕೆ ಇಟ್ಟುಕೊಂಡ. ಅಟ್ಟಕ್ಕೆ ಹೋಗಬೇಕಾದರೆ ಕೋಣೆಯಿಂದಲೇ ಒಂದು ಮರದ ಹಂತ ಹತ್ತಿ ಹೋಗಬೇಕಾಗಿತ್ತು. ಗೌರಿಯೂ ವೆಂಕಮ್ಮನವರೂ ರಾತ್ರಿಯ ವೇಳೆ ಹಜಾರ ದಲ್ಲೆ ಮಲಗುತ್ತಿದ್ದರು.

## ೧೪

### ಹೆಂಗಸರೆಲ್ಲರೂ ಕರಿಯ ಗಂಡ ಬೇಡ ಅಂತ ಕುಳಿತುಬಿಟ್ಟರೆ ?

ನಾರಾಯಣಮೂರ್ತಿಯ ಸಂಸಾರ ಸುಖವಾಗಿಯೇ ಸಾಗುತ್ತಿತ್ತು. ಅವನು ಬಂದ ಸಂಬಳದಲ್ಲಿ ಮನೆಯ ಸಾಮಾನು ಮುಂತಾದ್ದನ್ನೆಲ್ಲ ಕೊಂಡು, ಬಾಡಿಗೆ ಕೊಟ್ಟು, ತನ್ನ ಖರ್ಚಿಗೆ ಬೇಕಾದರೆ ಎಂಟಾಣೆಯನ್ನೊ ಒಂದು ರೂಪಾಯನ್ನೊ ಇಟ್ಟುಕೊಂಡು ಉಳಿದ ಹಣವನ್ನು ಗೌರಿಯ ವಶಕ್ಕೆ ಕೊಟ್ಟು ಬಿಡುತ್ತಿದ್ದ.

ನಾರಾಯಣಮೂರ್ತಿಗೆ ಕೆಲಸ ಸಿಕ್ಕಿದ್ದ ವಿಷಯ, ಅವನು ಮನೆ ಮಾಡಿರುವುದು – ಎಲ್ಲ ನಾಗಪ್ಪನವರಿಗೆ ಯಾರೋ ಮೈಸೂರಿನಿಂದ ಹೋದವರಿಂದ ತಿಳಿಯಬಂತು. ಅವನು ಈ ವಿಚಾರವಾಗಿ ಅವರಿಗೆ ಒಂದು ಕಾಗದ ಹಾಕಿರಲಿಲ್ಲ. ಈ ಸಮಾಚಾರ ತಿಳಿದ ಕೂಡಲೆ ನಾಗಪ್ಪನವರು ತಮ್ಮ ಅಪಾರವಾದ ಸಂತೋಷವನ್ನು ಸೂಚಿಸಿ, ಆಶೀರ್ವಾದ ಮಾಡಿ, ಪ್ರಸ್ತದ ವಿಷಯ ಪ್ರಸ್ತಾಪವೆತ್ತಿ ಕಾಗದ ಬರೆದಿದ್ದರು.

ನಾರಾಯಣಮೂರ್ತಿ ಕಾಗದ ನೋಡಿಕೊಂಡು ಅದನ್ನು ಒಂದು ಕಡೆಗೆ ರೊಯ್ಯನೆ ಬಿಸುಟ. ಕಾಗದದ ವಿಷಯ ಏನೆಂಬುದು ವೆಂಕಮ್ಮನವರಿಗೂ ಗೌರಿಗೂ ತಟ್ಟನೆ ಗೊತ್ತಾಯಿತು. ವೆಂಕಮ್ಮನವರು ಮಗನಿಗೆ ಬುದ್ಧಿವಾದ ಹೇಳುವ ದನಿ ತೆಗೆದರು. ಅವನಿಗೆ ಇದ್ದದ್ದೂ ರೇಗಿತು.

ಗೌರಿ : "ಅಮ್ಮಾ, ಈ ವಿಷಯ ಅವನಿಗೆ ನನಗೆ ಬಿಡಮ್ಮ. ನೀನು ಸುಮ್ಮನೆ ಹೊತ್ತು ಗೊತ್ತು ಇಲ್ಲದೆ ಅವನನ್ನು ಪ್ರಸ್ತ ಮಾಡಿಕೊ ಪ್ರಸ್ತ ಮಾಡಿಕೊ ಅಂತ ಬಲವಂತ ಮಾಡುತ್ತಿರುತ್ತಿ. ಅವನಿಗೆ ರೇಗದೆ ಇನ್ನೇನಾಗುತ್ತೆ ."

ವೆಂಕಮ್ಮನವರು ಸುಮ್ಮನಾದರು. ಆ ದಿನ ಗೌರಿಯೂ ತಮ್ಮನ ಕೂಡ ಈ ವಿಷಯ ಎತ್ತಲೇ ಇಲ್ಲ.

ಎರಡು ಮೂರು ದಿನ ಕಳೆಯಿತು ; ಒಂದು ದಿನ ನಾಣು ಅಟ್ಟದ ಮೇಲೆ ದೀಪದ ಮುಂದೆ ಕುಳಿತು ದೇವರ ಪೂಜೆಯ ಮಂತ್ರವನ್ನು ಗಟ್ಟಿಮಾಡುತ್ತಾ ಕುಳಿತಿದ್ದ. ಗೌರಿ ಮೆಲ್ಲನೆ ಅಟ್ಟ ಹತ್ತಿ ಹೋಗಿ, ಅವನ ಬಳಿ ನಿಂತು,

"ನಾಣೂ" ಎಂದಳು. ಗೌರಿಯ ಧ್ವನಿ ಯಾವಾಗಲೂ ಮೃದು; ಆ ಧ್ವನಿ ಮೆಲ್ಲ ಮರುಕ ಬೆರೆತರಂತೂ ಅದು ಇನ್ನೂ ಮೃದುವಾಗಿಬಿಡುತ್ತಿತ್ತು. ಇಷ್ಟು ಹೊತ್ತಿನಲ್ಲಿ ಗೌರಿ ಏಕೆ ತನ್ನ ಬಳಿ ಬಂದಿದ್ದಾಳೆ ಎನ್ನುವುದು ಅವನಿಗೆ ಮೊದಲು ಹೊಳೆಯಲಿಲ್ಲ.

"ಏನು, ಗೌರಿ?" ಎಂದ.

"ನನ್ನ ಮಾತು ನಡಸಿಕೊಡುವುದಾದರೆ ನಾನು ಹೇಳುತ್ತೇನೆ" ಎಂದಳು.

ಅವನಿಗೆ ಅರ್ಥವಾಯಿತು. ಅವನೂ ಮೃದು ಧ್ವನಿಯಲ್ಲೇ ಉತ್ತರ ಕೊಟ್ಟ; ಅವನು ಗೌರಿಯನ್ನು ಎಂದೂ ಮನನೋಯಿಸಿದವನಲ್ಲ, ಮನ ನೋಯಿಸುವ ಇಚ್ಛೆ ಅವನಿಗೆ ಈಗಲೂ ಇರಲಿಲ್ಲ:

"ಗೌರೀ, ನಿನಗೆ ಅರ್ಥವಾಗುವುದಿಲ್ಲ".

"ನನಗೆ ಅರ್ಥವಾಗುತ್ತೆ ನಾಣು. ನನಗೆ ಎಲ್ಲ ಅರ್ಥವಾಗಿದೆ. ನಾನೇನೂ ಹುಡುಗಿಯಲ್ಲ. ನಿನಗಿಂತ ದೊಡ್ಡವಳು. ಸುಖ ಕಾಣದಿದ್ದರೂ ಕಷ್ಟ ಕಂಡವಳು. ನನಗೆ ತಿಳಿಯದು ಎಂದುಕೊಳ್ಳಬೇಡ. ನನಗೆ ಎಲ್ಲ ತಿಳಿಯುತ್ತೆ. ಧಾರೆಯ ದಿನ ನೀನು ಹಸೆ ಬಿಟ್ಟು ಬಂದಾಗ, ಮದುವೆ ಮಾಡಿಕೊಳ್ಳಬೇಡ ಅಂತ ನಿನಗೆ ಹೇಳಬೇಕೆಂದು ಅರ್ಧ ಮನಸ್ಸಿತ್ತು. ಆದರೆ . . ."

"ನೀನು ಹಾಗೆ ಯಾಕೆ ಹೇಳಲಿಲ್ಲ ಗೌರಿ. ನಿನ್ನ ಬಾಯಿಂದ ಆ ಮಾತು ಬಂದಿದ್ದರೆ ನಾನು ಖಂಡಿತ ಮದುವೆ ಮಾಡಿಕೊಳ್ಳುತ್ತಿರಲಿಲ್ಲ."

"ನಾನು ಯಾವ ಮಾತು ಆಡುವುದೂ ಕಷ್ಟವಾಯಿತಪ್ಪ. ಆ ಹುಡುಗಿಯ ಮೇಲಿನ ಮರುಕ ಬಾಯಿಕಟ್ಟಿತು. ಅದಕ್ಕೇ ಎಲ್ಲ ನಿನ್ನ ಇಚ್ಛೆಗೇ ಬಿಟ್ಟು ಬಿಟ್ಟದ್ದು. ನೀನು ಮಾಡಿಕೊಳ್ಳದೆ ಹೋಗಿದ್ದರೆ ನಾನೇನೂ ಮಾಡಿಕೊ ಅಂತ ಬಲವಂತ ಮಾಡುತ್ತಿರಲಿಲ್ಲ."

"ಹಾಗಾದರೆ ನನ್ನ ಮೇಲೆ ತಪ್ಪು ಹೊರಿಸುತ್ತಿ ನೀನು?"

"ನಾನು ತಪ್ಪು ನಿನ್ನದು ಅನ್ನುವುದಿಲ್ಲ. ನೀನು ಒಳ್ಳೆಯ ಕೆಲಸವನ್ನೇ ಮಾಡಿದೆ. ನೀನು ಮದುವೆ ಮಾಡಿಕೊಂಡದ್ದೂ ನನಗೆ ಸಂತೋಷವೇ ಆಯಿತು."

"ಏನು, ಗೌರಿ! ಕಪ್ಪು ಹೆಣ್ಣನ್ನು ಕಟ್ಟಿಕೊಂಡದ್ದೂ ನಿನಗೆ ಸಂತೋಷವೇ ಆಯಿತೆ?"

" ಹಾಗಲ್ಲ, ನಾಣು. ನಿನ್ನ ಧೈರ್ಯ ನೋಡಿ ನನಗೆ ಸಂತೋಷವಾಯಿತು. ಈಗ ಏಕೆ ಹೆಣ್ಣಿಗನ ಹಾಗೆ ಆಡುತ್ತಿ ? ಆಗ ತೋರಿಸಿದ ಧೈರ್ಯವನ್ನು ಈಗಲೂ ತೋರಿಸು. ಹೆಂಡತಿಯನ್ನು ಮನೆಗೆ ಕರೆದುಕೊಂಡು ಬಾ. ನೀನು ಅವಳನ್ನೇನು ಮುದ್ದಿಸಬೇಡ, ಮೆರಸಬೇಡ. ಹಸು ಸಾಕಿಕೊಳ್ಳುವುದಿಲ್ಲವೆ, ನಾಯಿ ಸಾಕಿಕೊಳ್ಳುವುದಿಲ್ಲವೆ ? ಅದಕ್ಕಿಂತಲೂ ಕಡೆಯಾದಳೆ ನಿನ್ನ ಹೆಂಡತಿ ? "

" ಗೌರಿ, ನೀನು ಹೇಳುವುದೆಲ್ಲ ನ್ಯಾಯ. ಆದರೆ . . . ಆ ಕರಿ ಮೋರೆ ಕಂಡರೆ . . . "

" ನಾಣು, ನನಗೆ ಇನ್ನೂ ಚೆನ್ನಾಗಿ ನೆನಪಿದೆ. ನಿನಗೂ ನೆನಪಿರ ಬಹುದು. ಅವರು ಕಪ್ಪಗೇ ಇದ್ದರು. ನಾನು ಅವರಲ್ಲಿ ತುಂಬ ಭಕ್ತಿ ಪ್ರೀತಿ ಇಟ್ಟುಕೊಂಡಿದ್ದೆ. ಹೆಂಗಸರೆಲ್ಲರೂ ಕರಿಯ ಗಂಡಂದಿರು ಬೇಡ ಅಂತ ಕುಳಿತುಬಿಟ್ಟರೆ . . .? "

" ಗೌರಿ, ಗೌರಿ, ನೀನು ಹೇಳುವುದೆಲ್ಲ ನ್ಯಾಯ, ನ್ಯಾಯ. ನಿನ್ನ ಕೈಲಿ ವಾದ ಮಾಡುವುದಕ್ಕಾಗುವುದಿಲ್ಲ. ಇಲ್ಲಿ ಎರಡು ಹೊತ್ತು ತಿಂದುಕೊಂಡಿರುವ ಬದಲು ಅಲ್ಲಿಯೇ ತಿಂದುಕೊಂಡಿರಲಿ. ನನಗೂ ನೆಮ್ಮದಿಯಾಗಿರುತ್ತೆ. ಅವಳಿಗೂ ನೆಮ್ಮದಿಯಾಗಿರುತ್ತೆ. ಇನ್ನು ಈ ವಿಷಯ ಸಾಕು. ನೀನು ಮಲಗಿಕೊ ಹೋಗು, ಗೌರಿ."

ಗೌರಿ ಮರುಮಾತಾಡದೆ ಹೊರಟುಹೋದಳು.

## ೧೫

## ರೂಪಿದ್ದರೆ ಗುಣವಿಲ್ಲದಿರಬಹುದು ; ಗುಣವಿದ್ದರೆ ರೂಪಿಲ್ಲದಿರಬಹುದು

ಗೌರಿಗೆ ಬಹಳ ಹೊತ್ತು ನಿದ್ದೆ ಬರಲಿಲ್ಲ. ಒಂದು ಕಡೆ ತಮ್ಮನ ಮೇಲಿನ ಮರುಕ: ಕಪ್ಪು ಹೆಣ್ಣಿನ ಮೇಲೆ ಅವನಿಗೆ ಅಸಹ್ಯ ಹುಟ್ಟಿದೆ. ರತಿಯಂತಹ ಹೆಂಡತಿಯನ್ನು ಮದುವೆಯಾಗುತ್ತೇನೆಂದು ಕನಸು ಕಾಣುತ್ತಿದ್ದ ತರುಣನಲ್ಲಿ ಈ ಮನೋಭಾವ ಉಂಟಾಗುವುದು ಸಹಜವೇ. ಮತ್ತೊಂದು ಕಡೆ ಜಯಲಕ್ಷ್ಮಿಯ ಮೇಲಿನ ಮರುಕ: ಪಾಪ, ಅವಳದ್ದೇನು ಅಪರಾಧ? ಕಪ್ಪಾಗಿ ಹುಟ್ಟಿದ್ದು ಅವಳ ಅಪರಾಧವೇ? ಅಯ್ಯೋ, ಪಾಪ! ಆ ಹೆಣ್ಣು ಏನು ಮಾಡೀತು? ಅದರ ಮನಸ್ಸು ಈಗ ಎಷ್ಟು ನೋಯುತ್ತಿರಬೇಕು? ನಾರಾಯಣಮೂರ್ತಿ ಹಟ ಹಿಡಿದು ಪ್ರಸ್ತ ಮಾಡಿಕೊಳ್ಳದೆಯೇ ಹೋದರೆ ಅದರ ಮುಂದಿನ ಗತಿಯೇನು? ತನಗಂತೂ ಗಂಡನಿಲ್ಲ; ಅದೊಂದು ಬಗೆ. ಗಂಡನಿದ್ದೂ ಗಂಡನಿಗೆ ಬೇಡವಾಗುವ ಸ್ಥಿತಿ ಬಹು ಶೋಚನೀಯವಾದದ್ದು. ಈಗ ಏನು ಮಾಡುವುದು? ತಾನು ಏನು ಮಾಡಬಲ್ಲಳು? ಹೀಗೆಯೇ ಯೋಚಿಸುತ್ತ ಯೋಚಿಸುತ್ತ ತಮ್ಮನಮೇಲೆ ಇದ್ದುದಕ್ಕಿಂತ ಜಯಲಕ್ಷ್ಮಿಯ ಮೇಲಿನ ಮರುಕ ಹೆಚ್ಚಾಗುತ್ತ ಬಂತು ಗೌರಿಗೆ.

ನಾಣು ಪ್ರಸ್ತ ಮಾಡಿಕೊಂಡರೆ ಮಾಡಿಕೊಳ್ಳಲಿ ಇಲ್ಲದಿದ್ದರೆ ಬಿಡಲಿ; ಹೆಣ್ಣನ್ನು ಮನೆಯಲ್ಲಿ ಕರೆದುಕೊಂಡು ಇಟ್ಟುಕೊಂಡರೆ, ಕಾಲ ಕಳೆದಂತೆ ಅವನ ಮನಸ್ಸು ಕರಗುತ್ತ ಬರಬಹುದು; ಮನಸ್ಸು ಕರಗುತ್ತ ಬಂದರೆ ಸಾಕು, ಅದು ವಿಶ್ವಾಸಕ್ಕೆ ತಿರುಗಲು ಹೆಚ್ಚು ಕಾಲ ಬೇಕಾಗಿಲ್ಲ. ವಿಶ್ವಾಸ ಹುಟ್ಟಿತೆಂದರೆ ಕಪ್ಪೂ ಒಪ್ಪಾಗುತ್ತದೆ. ಆದರೆ ವಿಶ್ವಾಸ ಹುಟ್ಟುವುದೇ? ಅದು ಹುಟ್ಟುವ ಬಗೆ? ಅದು ತೀರ ಅಸಂಭವವಲ್ಲವೆ? ಪ್ರಯತ್ನಪಟ್ಟು ನೋಡಬೇಕು. ಆದರೆ, ಹೆಂಡತಿಯನ್ನು ಮನೆಯಲ್ಲಿ ಕರಸಿ ಇಟ್ಟುಕೊಳ್ಳಲು ನಾಣು ಒಪ್ಪುವನೋ? ಒಪ್ಪಿದರೂ ಒಪ್ಪಬಹುದು. ಹೀಗೆ, ಅವಳ ಯೋಚನೆ ಒಂದು ನಿಲುಗಡೆಗೆ ಬಂದಾಗ ಅವಳಿಗೆ ನಿದ್ದೆ ಹತ್ತತೊಡಗಿತು.

ಕೆಲವು ದಿನಗಳು ಕಳೆದುವು. ನಾಗಪ್ಪನವರು ತಮ್ಮ ಕಾಗದಕ್ಕೆ ಉತ್ತರ ಬಾರದಿರಲು ನಾಣುವಿಗೆ ಮತ್ತೊಂದು ಕಾಗದ ಬರೆದರು. ಈ ಕಾಗದ

ಬಂದ ಸಂದರ್ಭವನ್ನು ನೆನಪು ಮಾಡಿಕೊಂಡು ಗೌರಿ ನಾರಾಯಣಮೂರ್ತಿಗೆ ಹೀಗೆ ಹೇಳಿದಳು :

"ನಾಣು, ನೀನು ಪ್ರಸ್ತಮಾಡಿಕೊಳ್ಳದೆ ಹೋದರೆ ಚಿಂತೆಯಿಲ್ಲ. ಜಯಲಕ್ಷ್ಮಿ ಇಲ್ಲಿಗೆ ಬಂದು ಕೆಲವು ಕಾಲ ಇರಲಿ. ನಿನಗೆ ಮನಸ್ಸು ಬಂದಾಗ ಪ್ರಸ್ತ ಮಾಡಿಕೊ. ನಿನಗೆ ಸಂಕೋಚವಾದರೆ ನಾನೇ ಕಾಗದ ಬರೆದುಹಾಕುತ್ತೇನೆ."

ನಾಣು ಒಂದೇ ಮಾತಿನಲ್ಲಿ ಖಂಡಿತವಾಗಿ ಹೇಳಿಬಿಟ್ಟ :

"ನಾನು ಪ್ರಸ್ತಾನೂ ಮಾಡಿಕೊಳ್ಳುವುದಿಲ್ಲ; ಕರಸಿಕೊಳ್ಳುವುದೂ ಇಲ್ಲ. ಇನ್ನು ಈ ವಿಷಯ ನೀನು ನನ್ನ ಕೂಡ ಎತ್ತಕೂಡದು, ಗೌರಿ. ನಾನು ಏನು ಮಾಡಲಿ, ನಾನು ಎಷ್ಟೋ ಯೋಚಿಸಿದ್ದೇನೆ. ನನ್ನ ಮನಸ್ಸು ಒಪ್ಪುವುದಿಲ್ಲ. ನಾನೇನು ಮಾಡಲಿ, ಹೇಳು."

"ನಾಣು, ಕಾಗದಕ್ಕೆ ಏನಾದರೂ ಒಂದು ಉತ್ತರ ಬರೆಯಬೇಕು. ಏನು ಬರೆಯುತ್ತೀಯೆ? ಉತ್ತರ ಬರೆಯದಿರುವುದು ಚೆನ್ನಲ್ಲ, ಮರ್ಯಾದೆಯಲ್ಲ."

"ಅದನ್ನೂ ನಿಶ್ಚಯಮಾಡಿಬಿಟ್ಟಿದ್ದೇನೆ, ಗೌರಿ. ಅವರಿಗೆ ಬರೆದು ಹಾಕಿಬಿಡುತ್ತೇನೆ. 'ನನಗೆ ಪ್ರಸ್ತಮಾಡಿಕೊಳ್ಳುವುದಕ್ಕೆ ಇಷ್ಟವಿಲ್ಲ – ಇಂದೂ ಇಷ್ಟವಿಲ್ಲ, ಮುಂದೂ ಇಷ್ಟವಾಗಲಾರದು' ಅಂತ."

"ಅವರು ಸುಮ್ಮನಿರುತ್ತಾರೆ ಅಂತ ತಿಳಿದಿದ್ದೀಯ?"

"ಸುಮ್ಮನೆ ಇರದಿದ್ದರೆ ಏನಾದರೂ ಮಾಡಿಕೊಳ್ಳಲಿ."

"ನೀನು ವಿಚಿತ್ರ ಹುಡುಗ, ನಾಣು. ಇಬ್ಬರೂ ಕಷ್ಟಪಡುವುದೇಕೆ? ಜಯಲಕ್ಷ್ಮಿಯ ಹಣೆಯ ಬರಹ ಹಾಗಾಯಿತು . . . ನೀನು ಇನ್ನೊಂದು ಮದುವೆ ಮಾಡಿಕೊಳ್ಳುವುದು ತಾನೆ?"

"ಆ ವಿಷಯವಾಗಿಯೂ ಯೋಚನೆ ಮಾಡಿದೆ. ನಾನು ಮಾಡಿಕೊಳ್ಳುವುದಿಲ್ಲ."

"ಯಾಕೆ?"

"ಯಾಕೆ ಅಂದರೆ ಏನು ಹೇಳಲಿ. ಇನ್ನೊಂದು ಮದುವೆ ಮಾಡಿಕೊಂಡರೆ ಇನ್ನೊಂದು ಅನಾಹುತ ಆಗಬಹುದು, ಇನ್ನೊಂದು ಹೆಣ್ಣು

ಅಂದವಾಗಿರಬಹುದು, ನಡತೆ ಚೆನ್ನಾಗಿಲ್ಲದಿರಬಹುದು. ನನಗೆ ಮದುವೆ ಎಂದರೆ ಹೆದರಿಕೆಯಾಗಿಬಿಟ್ಟಿದೆ."

"ಹಾಗಾದರೆ ನೀನೇ ಒಪ್ಪುತ್ತೀಯಲ್ಲ: ರೂಪಿದ್ದರೆ ಗುಣ ಇಲ್ಲದಿರಬಹುದು; ಗುಣ ಇದ್ದರೆ ರೂಪು ಇಲ್ಲದಿರಬಹುದು; ಎರಡೂ ಇರುವವರು ವಿರಳ – ಎಂದು. ಜಯಲಕ್ಷ್ಮಿ ಗುಣವಂತೆಯಾಗಿರಬಹುದಲ್ಲ?"

"ಆದರೆ . . ಅವಳ ರೂಪು . . ಆ ಕಾಳಕಪ್ಪು! ಅದಕ್ಕೇನು ಹೇಳುತ್ತಿ?"

"ನಾಣು, ವಯಸ್ಸಾಗುತ್ತ ಆಗುತ್ತ ಅಂದ ಚೆಂದವೆಲ್ಲ ಅಡಗಿಹೋಗುತ್ತದೆ. ಒಳ್ಳೆಯ ಗುಣ ಮಾತ್ರ ಬೆಳೆಯುತ್ತ ಬರುತ್ತದೆ. ಕೊನೆಯಲ್ಲಿ ಕಾಣುವುದು, ಉಳಿಯುವುದು, ಗುಣ. ಗುಣಕ್ಕಾಗಿ ಜಯಲಕ್ಷ್ಮಿಯನ್ನು ಕರಸಿಕೊ. ರೂಪು ಬೇಕಾದರೆ . . . ನಿನಗೇನಪ್ಪ, ಗಂಡಸು : ಸಂಪಾದಿಸುವ ಶಕ್ತಿ ಇದೆ. ಜಯಲಕ್ಷ್ಮಿಯ ಕಡೆ ಆಸ್ತಿ ಸ್ವಲ್ಪ ಬಂದರೂ ಬರಬಹುದು. ಇನ್ನೊಂದು ಮದುವೆ ಮಾಡಿಕೊಂಡರಾಯಿತು. ನಾನೇ ಹೆಣ್ಣು ನೋಡಿಕೊಂಡು ಬರುತ್ತೇನೆ. ಆ ಭಾರ ನನಗಿರಲಿ."

"ಗೌರೀ, ಗೌರೀ! ನೀನು ಹೇಳುವುದೆಲ್ಲ ನ್ಯಾಯ, ನ್ಯಾಯ! ನೀನು ಬುದ್ಧಿವಂತೆ! ನಾನು ದಡ್ಡ! ನನ್ನದು ಕಲ್ಲೆದೆ, ತಿಳಿಯಿತೆ. ನನ್ನನ್ನು ಸುಮ್ಮನೆ ಬಿಟ್ಟುಬಿಡು. ನನಗೆ ದೇವರು ಬುದ್ಧಿ ಕೊಟ್ಟ ಹಾಗೆ ಮಾಡುತ್ತೇನೆ. ನನಗೆ ಒಳ್ಳೆಯ ಬುದ್ಧಿ ಕೊಡುವ ಹಾಗೆ ದೇವರಲ್ಲಾದರೂ ಮೊರೆಯಿಡು; ನನ್ನಲ್ಲಿ ಹೀಗೆ ಮೊರೆಯಿಟ್ಟರೆ ಏನು ಪ್ರಯೋಜನ? ನೀನು ಹೆಣ್ಣು; ಹೆಣ್ಣಿನ ಪರವಾಗಿ ಮಾತಾಡುತ್ತಿ. ನಾನು ಗಂಡಸು. ಗಂಡಸಿನ ಮನಸ್ಸು ನಿನಗೆ ಹೇಗೆ ಗೊತ್ತಾಗಬೇಕು?"

"ನಾಣು, ಇನ್ನು ಈ ವಿಷಯ ನಿನ್ನ ಕೂಡ ಮಾತಾಡುವುದಿಲ್ಲ. ದೇವರ ಇಚ್ಛೆ ಹೇಗಿದೆಯೊ ಹಾಗೆ ಆಗಲಿ."

ನಾಣು ತಾನು ಗೌರಿಯ ಕೈಲಿ ಹೇಗೆ ಹೇಳಿದ್ದನೋ ಹಾಗೆ ನಾಗಪ್ಪನವರಿಗೆ ಕಾಗದ ಬರೆದು ಹಾಕಿದ. ವೆಂಕಮ್ಮನವರೂ ಎಷ್ಟೊ ಬಗೆ ಹೇಳಿದರು ಹಾಗೆ ಬರೆಯಬಾರದೆಂದು. ನಾಣು ಕೇಳಲಿಲ್ಲ.

ಕಾಗದ ಕಂಡು ನಾಗಪ್ಪನವರಿಗೆ ಸಿಡಿಲು ಬಡಿದಂತಾಯಿತು. ಜಯಲಕ್ಷ್ಮಿ ತಾಯಿಯನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

## ೧೬

### ಭಾಗ್ಯಲಕ್ಷ್ಮಿ ಎಂದು ಬರುತ್ತಾಳೆಯೊ ನಮಗೆ ಗೊತ್ತಾಗುವುದಿಲ್ಲ

ನಾಗಪ್ಪನವರು ಓಡಿಬಂದರು. ನಾರಾಯಣಮೂರ್ತಿಗೆ ಪರಿಪರಿಯಲ್ಲಿ ಬೋಧಿಸಿದರು, ಬಗೆಬಗೆಯಲ್ಲಿ ಬೇಡಿಕೊಂಡರು. ವೆಂಕಮ್ಮನವರು, ಗೌರಿ ಸಹ ನಾಗಪ್ಪನವರ ಪರವಾಗಿ ಒಂದೆರಡು ಮಾತಾಡಿದರು. ಏನಾದರೂ ನಾರಾಯಣಮೂರ್ತಿ ಸಗ್ಗಲೇ ಇಲ್ಲ. "ಇಲ್ಲ" ಎಂದು ಒಂದೇ ಮಾತಿನಲ್ಲಿ ಖಂಡಿತವಾದ ಉತ್ತರ ಕೊಟ್ಟು ಮೌನವನ್ನು ತಳೆದ. ಆ ಮೌನ ಕವಚವನ್ನು ಭೇದಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ನಾಗಪ್ಪನವರು ತಮ್ಮ ಆಸ್ತಿಯಲ್ಲಿ ಅರ್ಧವನ್ನು ನಾರಾಯಣಮೂರ್ತಿಗೇ ಬರೆದು ಕೊಡುವುದಾಗಿಯೂ ಹೇಳಿದರು. ಈ ಗಾಳಕ್ಕೂ ಸಿಕ್ಕಿಕೊಳ್ಳಲಿಲ್ಲ ನಾರಾಯಣಮೂರ್ತಿಯ ಮನಸ್ಸು. ನಾಗಪ್ಪನವರು ಕಂಬನಿದುಂಬಿ ನಿರಾಶರಾಗಿ ಹೊರಟುಹೋದರು.

ನಾಗಪ್ಪನವರು ಕಾಲಪುರುಷನನ್ನು ನಂಬಿ ಕುಳಿತರು. ಕಾಲಪುರುಷನಿಗೂ ಸಾಧ್ಯವಾಗಲಿಲ್ಲ ನಾರಾಯಣಮೂರ್ತಿಯ ನಿಶ್ಚಿತ ಮನಸ್ಸನ್ನು ಬದಲಾಯಿಸುವುದಕ್ಕೆ.

ಜಯಲಕ್ಷ್ಮಿಯ ಮದುವೆಯಾಗಿ ಐದು ವರ್ಷ ಕಾಲವಾಗಿತ್ತು; ಅವಳು ದೊಡ್ಡವಳಾಗಿ ಎರಡು ವರ್ಷದ ಮೇಲಾಗಿತ್ತು. ನಾಗಪ್ಪನವರು ನಾರಾಯಣಮೂರ್ತಿಯನ್ನು ಕಡೆಯ ಸಲ ಪ್ರಾರ್ಥಿಸಿ ಒಂದು ವರ್ಷದ ಮೇಲಾಗಿತ್ತು.

* * *

ಒಂದು ದಿನ ರಾತ್ರಿ. ಎಂಟೂವರೆ ಗಂಟೆಯ ಸಮಯ. ನಾರಾಯಣಮೂರ್ತಿ ಇನ್ನೂ ಮನೆಗೆ ಬಂದಿರಲಿಲ್ಲ. ಬರುವ ಹೊತ್ತಾಗಿತ್ತು. ಅವನು ಕಚೇರಿ ಬಿಡುವುದೇ ಒಂದೊಂದು ದಿನ ಸಂಜೆ ಏಳು ಗಂಟೆಯ ಮೇಲಾಗಿ ಬಿಡುತಿತ್ತು.

ಗೌರಿಗೆ ಕಳೆದ ಎರಡು ದಿನಗಳಿಂದ ಸ್ವಲ್ಪ ಜ್ವರ ಬರುತ್ತಿತ್ತು. ವೆಂಕಮ್ಮನವರು ಗೌರಿ ಊಟಮಾಡಿದ ಎಲೆಯನ್ನು ಹೊರಕ್ಕೆ ಬೀಸಾಡಲು ಜಗುಲಿಯ ಮೇಲಕ್ಕೆ ಬಂದರು.

ಜಗುಲಿಯ ಮೇಲೆ ಯಾವುದೋ ವ್ಯಕ್ತಿ ನಿಂತಿತ್ತು. ಬೀದಿಯಲ್ಲಿ ದೀಪಗಳು ಹೆಚ್ಚಾಗಿ ಇಲ್ಲದೆಹೋದರೂ, ಹುಣ್ಣಿಮೆ ಮುಂದಿನ ಚಂದ್ರ ಬೆಳಗುತ್ತ

ಇದ್ದುದರಿಂದ ನಿಂತಿದ್ದ ವ್ಯಕ್ತಿ ಹೆಂಗಸೆಂಬುದು ವೆಂಕಮ್ಮನವರಿಗೆ ಗೊತ್ತಾಗುವಂತಿತ್ತು. ಅವರಿಗೆ ರಾತ್ರಿಯ ವೇಳೆ ಕಣ್ಣು ಅಷ್ಟು ಚೆನ್ನಾಗಿ ಕಾಣದೆ ಹೋದರೂ ಮಬ್ಬುಮಬ್ಬಾಗಿ ಸ್ವರೂಪ ಕಾಣುತ್ತಿತ್ತು.

"ಯಾರಮ್ಮ ?" ಎಂದು ಮೆಲುದನಿಯಲ್ಲಿ ಕೇಳಿದರು ವೆಂಕಮ್ಮ.

"ನಾನು" ಎಂದು ಮೆಲುದನಿಯಲ್ಲಿ ಉತ್ತರ ಬಂತು.

"ಯಾರು, ಸುಬ್ಬೀನೇ ?" ಎಂದು ಕೇಳಿದರು ವೆಂಕಮ್ಮ. (ಸುಬ್ಬಿ ಪಕ್ಕದ ಮನೆಯ ಸಾವಿತ್ರಮ್ಮನವರ ಮಗಳು.)

"ಅಲ್ಲ, ನಾನು."

"ನಾನು ಅಂದರೆ ಯಾರೇ ? ನಿಮ್ಮಪ್ಪ ನಿನಗೆ ಹೆಸರಿಟ್ಟಿಲ್ಲವೆ ?"

"ನಾನು, ಜಯಲಕ್ಷ್ಮಿ"

"ಯಾರು, ಜಯಲಕ್ಷ್ಮಿ! . . . ಜಯಲಕ್ಷ್ಮಿ!! ನಾಣಿ ಹೆಂಡತಿಯೇ !!! ಇದೇನೇ ಕತ್ತಲಲ್ಲಿ ನಿಂತಿದ್ದಿ ಒಬ್ಬಳೇ ? ಈಗ ಊರಿಂದ ಬಂದೆಯಾ ಹೇಗೆ? ನಾಗಪ್ಪನವರು ಎಲ್ಲೇ ? "

"ಅಪ್ಪ ಹೊರಟುಹೋದರು."

"ಹೊರಟುಹೋದರು ಅಂದರೆ ಏನೇ !?"

"ನನ್ನ ಇಲ್ಲಿ ಬಿಟ್ಟು ಊರಿಗೆ ವಾಪಸು ಹೊರಟುಹೋದರು."

"ಏನು, ನಿನ್ನನ್ನ ಇಲ್ಲಿ ಬಿಟ್ಟುಬಿಟ್ಟು ಊರಿಗೆ ಹೊರಟುಹೋದರೆ! ನಾಚಿಗೆಗೇಡೇ ಸರಿ !!"

ವೆಂಕಮ್ಮನವರು ದಡದಡನೆ ಒಳಕ್ಕೆ ಹೋದರು. ಒಬ್ಬಳೇ ನಿಂತಿದ್ದ ಜಯಲಕ್ಷ್ಮಿಯನ್ನೂ ಒಳಕ್ಕೆ ಕರೆಯುವುದನ್ನು ಮರೆತುಬಿಟ್ಟರು. ಸಮಾಚಾರವನ್ನು ಗೌರಿಗೆ ತಿಳಿಸಿದರು.

"ಅಮ್ಮ, ನಾಚಿಗೆಗೇಡೂ ಇಲ್ಲ ಏನೂ ಇಲ್ಲ. ಅವರಪ್ಪ ಕರೆತಂದು ಬಿಟ್ಟುಬಿಟ್ಟರೆ ಆ ಹುಡುಗಿ ಏನುಮಾಡುತ್ತೆ ಪಾಪ. ಆಮೇಲೆ ನ್ಯಾಯಾನ್ಯಾಯ ವಿಚಾರಿಸೋಣ. ಮೊದಲು ಹುಡುಗಿಯನ್ನು ಒಳಕ್ಕೆ ಕರೆದುಕೊಂಡು ಬಾ."

ವೆಂಕಮ್ಮನವರು ಹೋಗಿ ಜಯಲಕ್ಷ್ಮಿಯನ್ನು ಒಳಕ್ಕೆ ಕರೆದರು. ಜಯಲಕ್ಷ್ಮಿ ತನ್ನ ಸಾಮಾನನ್ನು ಒಂದೊಂದಾಗಿ ಒಳಕ್ಕೆ ತಂದಿಟ್ಟು, ಹಜಾರದಲ್ಲಿ ಗೋಡೆಯೊರಗಿ ನಿಂತಿದ್ದಳು.

"ಒಳಕ್ಕೆ ಬಾರಮ್ಮ, ಕೂತುಕೊ" ಎಂದು ಗೌರಿ ನರಳುವ ದನಿಯಲ್ಲಿ ಹೇಳಿದಳು.

ಜಯಲಕ್ಷ್ಮಿ ಹೋಗಿ ಗೌರಿಯ ಪಕ್ಕದಲ್ಲಿ ಕುಳಿತಳು: "ಅತ್ತಿಗಮ್ಮ, ಮೈಗೆ ಸರಿಯಿಲ್ಲವೆ ?" ಎಂದು ಕೇಳಿ, ಗೌರಿಯ ಹಣೆ ಮುಟ್ಟಿದಳು.

'ಆಹಾ, ಎಂಥ ಚಿನ್ನದಂಥ ಹುಡುಗಿ. ತನ್ನ ದುಃಖವನ್ನು ನುಂಗಿಕೊಂಡು ನನ್ನ ಕ್ಷೇಮವನ್ನು ಎಷ್ಟು ನಿಶ್ವಾಸದಿಂದ ಆರೈಯುತ್ತಿದ್ದಾಳೆ'–ಎನ್ನಿಸಿತು ಗೌರಿಗೆ.

"ನಾಣಿ ಬರುವುದು ತುಂಬಾ ಹೊತ್ತಾಗುತ್ತೆ, ನೀನು ಊಟ ಮಾಡಿ ಮಲಗಿಕೊಳ್ಳಮ್ಮ. ಪಾಪ, ಅಲ್ಲಿಂದಿಲ್ಲಿಗೆ ಪ್ರಯಾಣ ಮಾಡಿ ತುಂಬ ದಣಿದಿರಬೇಕು" ಎಂದರು ವೆಂಕಮ್ಮನವರು.

"ಇಲ್ಲ, ಅವರು ಬಂದು ಊಟಮಾಡಿ ಆಗಲಿ, ಆಮೇಲೆ ನಾನು ಮಾಡುತ್ತೇನೆ."

"ಹಾಗೇ ಮಾಡಲಮ್ಮ, ಸ್ವಲ್ಪ ಸುಧಾರಿಸಿಕೊಳ್ಳಲಿ. ನೀನು ಹೋಗಿ ಇನ್ನೊಂದಿಷ್ಟು ಅನ್ನ ಮಾಡು, ಸಾಕಾಗುವುದಿಲ್ಲವೇನೋ" ಎಂದಳು ಗೌರಿ.

"ನೀವು ಮಲಗಿಕೊಳ್ಳಿ ಅತ್ತೆ. ಅಡಿಗೆ ಮನೆ ತೋರಿಸಿಕೊಟ್ಟರೆ, ಬೇರೆ ಸೀರೆ ಉಟ್ಟುಕೊಂಡು ನಾನು ಮಾಡುತ್ತೇನೆ" ಎಂದಳು ಜಯಲಕ್ಷ್ಮಿ.

ವೆಂಕಮ್ಮನವರಿಗೆ ತುಂಬ ಸಂತೋಷವಾಯಿತು. ಬಂದ ದಿನವೇ ಹೀಗೆ ಹೇಳಬೇಕಾದರೆ ಇವಳು ಒಳ್ಳೆಯ ಸೊಸೆಯಾಗಿರುತ್ತಾಳೆ ಎನ್ನಿಸಿತು ಅವರಿಗೆ.

"ಪರವಾಯಿಲ್ಲ ಅಮ್ಮ, ನೀನು ಸುಧಾರಿಸಿಕೊ" ಎಂದು ವೆಂಕಮ್ಮನವರು ಅಡಿಗೆಯ ಮನೆಯ ಕಡೆಗೆ ಹೊರಟರು.

ಸ್ವಲ್ಪ ಹೊತ್ತಾದ ಮೇಲೆ ನಾರಾಯಣಮೂರ್ತಿ ಬರಿಯ ಬಾಗಿಲನ್ನು ತೆರೆದುಕೊಂಡು ಒಳಕ್ಕೆ ಬಂದ. ಹಜಾರದಲ್ಲಿ ಇಟ್ಟಿದ್ದ ಜಯಲಕ್ಷ್ಮಿಯ ಗಂಟುಮೂಟೆ ಸಣ್ಣದಾಗಿ ಉರಿಯುತ್ತಿದ್ದ ಲ್ಯಾಂಪಿನ ಬೆಳಕಿನಲ್ಲಿ ಅವನ ದೃಷ್ಟಿಗೆ ಬೀಳಲಿಲ್ಲ. "ಅಮ್ಮ, ಅಮ್ಮ" ಎಂದು ಕೂಗಿದ. ಅವನು ಹೀಗೆ ಕೂಗಿಕೊಂಡು ಬಂದು ಎಷ್ಟೋ ಕಾಲವಾಗಿತ್ತು. "ಏನೋ ?" ಎಂದು ಓಡಿ ಬಂದರು ವೆಂಕಮ್ಮನವರು. "ಅಮ್ಮ, ನನಗೆ ಶಿರಸ್ತೇದಾರರ ಕೆಲಸಕ್ಕೆ ಶಿಫಾರಸು ಮಾಡಿದ್ದರು. ನಿನಗೆ ಹೇಳಿರಲಿಲ್ಲವೆ. ಈವೊತ್ತು ಆರ್ಡರಾಗಿದೆ.

ನನಗೆ ಶಿರಸ್ತೇದಾರರ ಕೆಲಸ ನಾಳೆಯಿಂದ. ಐವತ್ತು ರೂಪಾಯಿ ಸಂಬಳ."

"ಐವತ್ತು ರೂಪಾಯಿ!" ಎಂದು ಬಾಯಿಬಿಟ್ಟರು ವೆಂಕಮ್ಮನವರು.

"ಗೌರಿ, ಈಗ ಹೇಗಿದೆ ಮೈಗೆ?" ಎಂದು ನಾರಾಯಣಮೂರ್ತಿ ಕೋಣೆಯ ಬಾಗಿಲ ಬಳಿ ನಿಂತು ಗೌರಿಯನ್ನು ವಿಚಾರಿಸಿದ. ಗೌರಿಯ ತಲೆಯ ಬಳಿ ಬಂದು ಕತ್ತಲೆ ಮೂಲೆಯಲ್ಲಿ ಕುಳಿತಿದ್ದ ಜಯಲಕ್ಷ್ಮಿ ಕಣ್ಣಿಗೆ ಬೀಳಲಿಲ್ಲ.

ಗೌರಿ ಹೇಳಿದಳು: "ನಾಣು, ಅದೃಷ್ಟ ಎಂದರೆ ಇದು. ಲಕ್ಷ್ಮಿ ಚಂಚಲೆ. ಒಂದು ಕಡೆ ಸ್ಥಿರವಾಗಿ ನಿಲ್ಲುವುದಿಲ್ಲ. ಭಾಗ್ಯಲಕ್ಷ್ಮಿ ಎಂದು ಬರುತ್ತಾಳೋ ನಮಗೆ ಗೊತ್ತಾಗುವುದಿಲ್ಲ. ಈಗ ಐದಾರು ವರ್ಷ ಹಿಂದಿನಿಂದಲೇ ಭಾಗ್ಯಲಕ್ಷ್ಮಿಯ ಕೃಪಾಕಟಾಕ್ಷ ನಿನ್ನ ಮೇಲೆ ಬೀಳಲು ಮೊದಲಾಯಿತು. ಈವೊತ್ತು ಭಾಗ್ಯಲಕ್ಷ್ಮಿ ನಮ್ಮ ಮನೆಯ ಹೊಸಿಲು ದಾಟಿ ಒಳಕ್ಕೆ ಬಂದಿದ್ದಾಳೆ. ನಿನ್ನ ಪುಣ್ಯ. ಭಾಗ್ಯಲಕ್ಷ್ಮಿ ಎಷ್ಟೇ ಚಂಚಲೆಯಾದರೂ ಇಂದಿನಿಂದ ನಿನ್ನ ಮನೆಯಲ್ಲಿ ಸ್ಥಿರವಾಗಿ ನೆಲಸಲು ಬಂದಿದ್ದಾಳೆ. ಅವಳನ್ನು ಅಟ್ಟಿಬಿಡುತ್ತೀಯೇನೂ? ಭಾಗ್ಯಲಕ್ಷ್ಮಿಯನ್ನು ನೀನು ಅಟ್ಟಿಬಿಡುತ್ತೀಯೇನೂ?"

"ಏನು ಗೌರಿ ನೀನು ಹೇಳುವುದು? ಬಂದ ಕೆಲಸ ನಾನೇಕೆ ಬಿಡಲಿ? ಅದರಷ್ಟಕ್ಕೆ ಅದೇ ಬರುತ್ತಿರುವ ಭಾಗ್ಯವನ್ನು ಯಾರಾದರೂ ದೂರ ಮಾಡುತ್ತಾರೆಯೆ? ನಿನ್ನ ಪ್ರಶ್ನೆ ವಿಚಿತ್ರವಾಗಿದೆ."

"ಕಣ್ಣಿಗೆ ಕಾಣದ ಭಾಗ್ಯಲಕ್ಷ್ಮಿ ಕಾಣುವಹಾಗೆ ಬಂದಿದ್ದಾಳೆ, ನೋಡಿಲ್ಲಿ" ಎಂದು ಹಿಂದೆ ಕುಳಿತಿದ್ದ ಜಯಲಕ್ಷ್ಮಿಯ ಕಡೆಗೆ ತಲೆ ತಿರುಗಿಸಿ, "ಜಯ, ಯಜಮಾನರಿಗೆ ನಮಸ್ಕಾರ ಮಾಡಮ್ಮ" ಎಂದಳು.

ನಾರಾಯಣಮೂರ್ತಿ ದಿಗ್ಭ್ರಮೆಹಿಡಿದು ಕಲ್ಲುಬೊಂಬೆಯಂತೆ ನಿಂತಿದ್ದ. ಜಯಲಕ್ಷ್ಮಿ ಎದ್ದುಹೋಗಿ ಪತಿಯ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದಳು. ಅವಳ ಕೈ ತನ್ನ ಕಾಲನ್ನು ಸೋಂಕಿದಾಗ ನಾರಾಯಣಮೂರ್ತಿಗೆ ಮೈಯೆಲ್ಲ ರೋಮಾಂಚನವಾಯಿತು. ಇನ್ನೂ ಸ್ತಬ್ಧನಾಗಿಯೆ ನಿಂತಿದ್ದ. ವೆಂಕಮ್ಮನವರು ಬೆರಗಾಗಿ ನೋಡುತ್ತ ನಿಂತಿದ್ದರು. ಜಯಲಕ್ಷ್ಮಿ ಹೋಗಿ ಅವರಿಗೂ ನಮಸ್ಕಾರ ಮಾಡಿದಳು.

೧೭

## ಹೆಣ್ಣಿಗೆ ಗಂಡನ ಮನೆಯೇ ಗತಿ

ರಾತ್ರಿ ಒಬ್ಬರೂ ಒಂದು ವಿಷಯವನ್ನೂ ಮಾತಾಡಲಿಲ್ಲ.

ಬೆಳಗ್ಗೆ ನಾರಾಯಣಮೂರ್ತಿ ಎಂದಿಗಿಂತ ಹೊತ್ತಿಗೆ ಮುಂಚೆಯೆ ಎದ್ದು ಹೊರಕ್ಕೆ ಹೊರಟುಹೋದ.

ಗೌರಿ ಜಯಲಕ್ಷ್ಮಿಗೆ ಹೇಳಿದಳು: "ಜಯ, ಬಹಳ ಸಂತೋಷ ವಾಯಿತು. ನೀನು ಧೈರ್ಯಮಾಡಿದ್ದು ಒಳ್ಳೆಯ ಕೆಲಸವಾಯಿತು."

"ಅತ್ತಿಗಮ್ಮಾ, ನಿನ್ನ ಕಾಗದ ಬಂದಾಗ ನಮ್ಮ ತಂದೆ ನಿನ್ನ ಮಾತಿನಂತೆ ನಡೆಯುವುದಕ್ಕೆ ಆಗುವುದಿಲ್ಲ ಎಂದುಬಿಟ್ಟರು. 'ಪ್ರಸ್ತ ಮಾಡಿಕೊಂಡರೆ ಮಾಡಿಕೊಳ್ಳಲಿ, ಇಲ್ಲದಿದ್ದರೆ ಮನೆಯಲ್ಲೇ ಬಿದ್ದಿರಲಿ, ಪ್ರಸ್ತ ಮಾಡದೆ ಖಂಡಿತ ಹಾಗೆಯೇ ಕಳಿಸಿಕೊಡುವುದಿಲ್ಲ, ಶುದ್ಧ ಅವಮಾನ' ಎಂದುಬಿಟ್ಟರು. ನಿನ್ನ ಜವಾಬ್ದಾರಿಯಮೇಲೆ ನನ್ನನ್ನು ಇಲ್ಲಿಗೆ ಕಳಿಸಿಕೊಡಲು ಅವರಿಗೆ ಮನಸ್ಸು ಬರಲಿಲ್ಲ. ಆದರೆ, ನೀನು ಬರೆದದ್ದು ನನಗೆ ಒಪ್ಪಿಗೆಯಾಯಿತು. ನನ್ನ ಯಜಮಾನರ ಮನೆಗೆ ಬರುವುದಕ್ಕೆ ನನಗೆ ಯಾರ ಅಡ್ಡಿಯೇನು, ಯಾರ ಶಿಫಾರಸೇನು, ಯಾರು ಆಡಿಕೊಂಡರೆ ನನಗೇನು – ಅನ್ನಿಸಿತು ನನಗೆ. 'ಆದದ್ದು ಆಗಿಹೋಗಲಿ, ನಾನು ಅಲ್ಲಿಗೆ ಹೋಗುವುದೇ ಖಂಡಿತ, ನನ್ನನ್ನು ಕಳಿಸಿಕೊಟ್ಟುಬಿಡಿ' ಅಂತ ಹಟ ಹಿಡಿದೆ. ನನಗೆ ನಿಜವಾಗಿಯೂ ಇಲ್ಲಿಗೆ ಬಂದುಬಿಡಬೇಕು ಅಂತ ಒಂದೇ ಒಂದು ಆಸೆ ಉಂಟಾಯಿತು. ನಮ್ಮ ತಂದೆ ಮೊದಲು ನನ್ನ ಮಾತಿಗೆ ಕಿವಿಕೊಡಲಿಲ್ಲ. ನಾನು ಅನ್ನ ನೀರು ಬಿಟ್ಟು ಕುಳಿತೆ. 'ನಿನ್ನ ಹಣೆಯಲ್ಲಿ ಬರೆದಿದ್ದಂತೆ ಆಗಲಿ' ಅಂತ ಕರೆದುಕೊಂಡು ಬಂದು ಬಿಟ್ಟರು. ಅತ್ತಿಗಮ್ಮ, ಇನ್ನು ನನ್ನ ಸುಖ ದುಃಖ ಎಲ್ಲ ನಿನ್ನ ಕೈ ಸೇರಿದ್ದು. ನೀನು ಹೇಳಿದ ಹಾಗೆ ನಾನು ಧೈರ್ಯ ಮಾಡಿ ಬಂದಿದ್ದೇನೆ."

"ಜಯ, ಒಳ್ಳೆಯ ಕೆಲಸ ಮಾಡಿದೆ. ಹೆದರಬೇಡ, ಎಲ್ಲ ಒಳ್ಳೆಯ ದಾಗುತ್ತೆ. ಎಂದಾದರೂ ಒಮ್ಮೆ ನಾಣುವಿನ ಕೈಲಿ ಮಾತಾಡುವ ಸಂದರ್ಭ ಬಂದರೆ – ಬರದೆ ಇರುವುದಿಲ್ಲ – ನಾನು ನಿನಗೆ ಕಾಗದ ಬರೆದಿದ್ದ ಸಂಗತಿ ಮಾತ್ರ ಅವನಿಗೆ ಖಂಡಿತ ತಿಳಿಸಬೇಡ."

"ಆಗಲಿ, ಗೌರಿ. ಅವರೊಡನೆ ಮಾತಾಡುವ ಭಾಗ್ಯವೂ ನನಗೆ ದೊರೆಯುವುದೇ!"

"ನನಗೆ ನಂಬಿಕೆಯಿದೆ, ಜಯ. ಅವನು ನಿನ್ನನ್ನು ಇನ್ನು ಖಂಡಿತ ನಿರಾಕರಿಸುವುದಿಲ್ಲ. ಮನೆಗೆ ಬಂದ ಭಾಗ್ಯಲಕ್ಷ್ಮಿಯನ್ನು ಹೊರಗಟ್ಟಬೇಡ ಎಂದು ಬೇಡಿಕೊಂಡಿದ್ದೇನೆ. ನೀನು ನಮ್ಮ ಮನೆಯ ಭಾಗ್ಯಲಕ್ಷ್ಮಿಯಮ್ಮ."

"ಎಲ್ಲ ನಿನ್ನ ಆಶೀರ್ವಾದ ಅತ್ತಿಗಮ್ಮ."

* * *

ನಾರಾಯಣಮೂರ್ತಿ ಊಟಕ್ಕೆ ಕುಳಿತಾಗ ವೆಂಕಮ್ಮನವರು ಜಯಲಕ್ಷ್ಮಿಯ ವಿಚಾರ ಎತ್ತಿದರು :

"ಮಗೂ, ಜಯಲಕ್ಷ್ಮಿಯ ಕಪ್ಪು ಈಗ ಎಷ್ಟೋ ತೇಲಿಹೋಗಿದೆ. ಮದುವೆಯಲ್ಲಿ ನನಗೆ ಹೇಗೆ ಹೇಗೋ ಕಂಡಳು. ಈಗ ಒಳ್ಳೆ ಲಕ್ಷಣವಾಗಿ ಕಾಣುತ್ತಾಳೆ. ದೊಡ್ಡವಳು ಬೇರೆ ಆಗಿದ್ದಾಳೆ ನೋಡು, ಮೈ ಕೈ ತುಂಬಿ ಕೊಂಡು ಬೊಂಬೆ ಹಾಗೆ ಕಾಣುತಾಳೆ ಕಣೋ, ಮಗೂ. ಬಣ್ಣ ಕಪ್ಪಾದ ರೇನು, ಲಕ್ಷಣವಂತೆ."

"ಅವಳ ಸಾಹಸ ನೋಡಿದೆಯೇನಮ್ಮ?"

"ಸಾಹಸವೇನು, ಸಾಹಸ. ಅಪ್ಪ ಅನ್ನಿಸಿಕೊಂಡವನು ಕರೆದುಕೊಂಡು ಬಂದು ರಾತ್ರಿ ಹೊತ್ತಿನಲ್ಲಿ ಜಗುಲಿಯ ಮೇಲೆ ನಿಲ್ಲಿಸಿಬಿಟ್ಟರೆ ಅವಳು ಗಂಡನ ಮನೆಯೊಳಕ್ಕೆ ಬರದೆ ಎಲ್ಲಿಗೋ ಹೋಗುವುದಕ್ಕಾಗುತ್ತೆ? ನೀನೇ ಹೇಳಪ್ಪ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಅಂತ ಕೇಳಿಲ್ಲವೆ ಮಗೂ. ಹೆಣ್ಣಿಗೆ ಗಂಡನ ಮನೆಯು ಗತಿಯಪ್ಪ. ಈಗ ನೋಡು, ನಾಳೆ ಜೋಯಿಸರ ಮನೆಗೆ ಹೋಗಿಬಿಟ್ಟು ಬರುತ್ತೇನೆ. ಒಂದು ಅಡ್ಡಿ ಕಳೆದುಹೋಗಲಿ. ಬೆಳೆದ ಹುಡುಗಿ. ಶಾಸ್ತ್ರ ಆಗಿಹೋಗಿಬಿಡಲಿ ಮಗೂ."

"ಅಮ್ಮ, ನೀನು ಸುಮ್ಮನಿರು. ಆ ಹುಡುಗಿ ಇಲ್ಲಿ ಬಂದದ್ದೇ ನನಗೆ ಸರಿ ಇಲ್ಲ. ಹೋಗಲಿ. ನನ್ನ ಅನ್ನದಲ್ಲಿ ಅವಳಿಗೂ ಹಕ್ಕು ಇದೆ, ತಿಂದುಕೊಂಡು ಹೋಗಲಿ. ಅವಳೂ ಮನುಷ್ಯ ಪ್ರಾಣಿ ಅಲ್ಲ ಅನ್ನುವಷ್ಟು ಕ್ರೂರ ಮನುಷ್ಯ ನಲ್ಲ ನಾನು. ಇನ್ನು ಹೆಚ್ಚಿನ ವಿಚಾರ ನನ್ನ ಕೂಡ ಯಾರೂ ಪ್ರಸ್ತಾಪಿಸ ಕೂಡದು. ಆಮೇಲೆ ಹುಡುಗಿ ಮನೆ ಬಿಟ್ಟು ಹೊರಡಬೇಕಾಗುತ್ತೆ, ಅಷ್ಟೆ."

## ೧೮

## ಬೆಳೆಯುವ ಪಯಿರು ಮೊಳಕೆಯಲ್ಲೆ ಕಾಣುತ್ತೆ

ಜಯಲಕ್ಷ್ಮಿ ಬಂದು ಒಂದು ವಾರದ ಮೇಲೆ ಆಗಿಹೋಯಿತು. ಗೌರಿಗೆ ಕಾಯಿಲೆ ಇನ್ನೂ ಹಾಗೆಯೆ ಇತ್ತು. ಜಯ ಗೌರಿ ಮಾಡುತ್ತಿದ್ದ ಕೆಲಸವೆಲ್ಲವನ್ನೂ ಈಗ ತಾನು ವಹಿಸಿಕೊಂಡಿದ್ದಳು. ಜೊತೆಗೆ, ಗೌರಿಯ ಶುಶ್ರೂಷೆಯನ್ನೂ ಅಚ್ಚುಕಟ್ಟಾಗಿ ಮಾಡುತ್ತಿದ್ದಳು.

ಗೌರಿ ಮನೆಗೆಲಸವನ್ನೆಲ್ಲಾ ಚೊಕ್ಕಟವಾಗಿ ಮಾಡುತ್ತಿದ್ದಳು, ಅಷ್ಟೆ. ಜಯ ಚೊಕ್ಕಟ ಶುಭ್ರತೆಯ ಜೊತೆಗೆ ಅಂದ ಚೆಂದವನ್ನೂ ಒಂದು ಶಿಸ್ತನ್ನೂ ಸೇರಿಸಿದ್ದಳು.

ಜಯಲಕ್ಷ್ಮಿ ಮನೆಯ ಸುತ್ತುಗೆಲಸಗಳನ್ನು ಮಾಡತೊಡಗಿದ ಮೇಲೆ ಮನೆಗೆ ಒಂದು ಹೊಸ ಕಳೆ ಬಂದಿತು. ಪ್ರತಿದಿನವೂ ಮನೆಯನ್ನೆಲ್ಲಾ ಚೆನ್ನಾಗಿ ಸಾರಿಸಿ ರಂಗವಲ್ಲಿ ಇಡುವಳು. ರಂಗವಲ್ಲಿಯಲ್ಲಿ ದಿನಕ್ಕೊಂದು ಬಗೆಯ ಹಸೆ ಚಿತ್ರ ಬರೆಯುವಳು. ಮನೆಯನ್ನು ದಿನಕ್ಕೆ ಐದಾರು ಸಲ ಗುಡಿಸುವಳು. ಅವಳು ಬೆಳಗಿದ ಪಾತ್ರೆಗಳು ಥಳಥಳನೆ ಹೊಳೆಯುತ್ತಿದ್ದುವು. ಅವಳು ಬರುವುದಕ್ಕೆ ಮೊದಲು ನಾರಾಯಣಮೂರ್ತಿ ಎರಡಕ್ಕೆ ಮೂರಕ್ಕೆ ತನ್ನ ಬಟ್ಟೆಗಳನ್ನು ತಾನೆ ಒಗೆದುಕೊಳ್ಳುತ್ತಿದ್ದ. ಈಗ ಅವನ ಬಟ್ಟೆಯನ್ನೆಲ್ಲ ಅವಳೆ ಒಗೆಯಲು ಮೊದಲುಮಾಡಿದಳು. ಅವನ ಬಟ್ಟೆಗೆ ಒಂದು ಕೊಳೆಯ ಬಣ್ಣ ಬಂದಿತ್ತು; ಈಗ ಅದು ಮಾಯವಾಗಿ, ಅಗಸನ ಮನೆಯ ಮಡಿಬಟ್ಟೆಯಂತೆ ಕಾಣತೊಡಗಿತು. ಈ ಮಾರ್ಪಾಟೆಲ್ಲ ಅವನ ಗಮನಕ್ಕೂ ಬಾರದೆ ಇರಲಿಲ್ಲ.

ಜಯಲಕ್ಷ್ಮಿಯ ಮನೆಗೆಲಸದ ಅಚ್ಚುಕಟ್ಟು ವೆಂಕಮ್ಮನವರಿಗಂತೂ ಬಹಳ ಮನಮೆಚ್ಚಾಯಿತು.

ಒಂದು ದಿನ ನಾಣಿ ಊಟಕ್ಕೆ ಕುಳಿತಾಗ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು :

"ನಾಣಿ, ಜಯನಂಥ ಗುಣವಂತೆಯಾದ ಹುಡುಗಿ ಇನ್ನು ಎಲ್ಲೂ ದೊರೆಯುವುದಿಲ್ಲ. ಅದೇನು ವಿನಯ, ಅದೇನು ಗಂಭೀರ, ಅದೆಷ್ಟು ಮುದ್ದಾಗಿ ಕೆಲಸ ಮಾಡುತಾಳೆ! ಇಂಥ ಹೆಣ್ಣಿನ ಹೊಟ್ಟೆ ಉರಿಸಬಾರದು ನೋಡು."

ಜಯಲಕ್ಷ್ಮಿಯ ಕೆಲಸದ ಅಂದಚೆಂದ ಅವನಿಗೂ ಕಾಣದೆ ಏನೂ ಹೋಗಿರಲಿಲ್ಲ ; ಆದರೂ ಅದನ್ನು ಒಪ್ಪಿಕೊಳ್ಳುವುದಕ್ಕೆ ಅವನಿಗೆ ಅದೊಂದು ಬಗೆಯ ಬಿಗುಮಾನ. ಸ್ವಲ್ಪ ತಿರಸ್ಕಾರದಿಂದಲೆ ಹೇಳಿದ:

"ಅಮ್ಮ, ಗಾದೆ ಕೇಳಿಲ್ಲವೆ: ಅಗಸ ಹೊಸದರಲ್ಲಿ ಗೋಣಿಯನ್ನು ಎತ್ತಿ ಎತ್ತಿ ಒಗೆದನಂತೆ !"

"ನೋಡು, ನೀನು ಸಾವಿರ ಹೇಳು. ಅಂಥ ಹುಡುಗಿಯಲ್ಲ ಇವಳು. ಬೆಳೆಯುವ ಪೈರು ಮೊಳಕೆಯಲ್ಲೆ ಕಾಣುತ್ತೆ ಅಂತ ಹೇಳುವುದಿಲ್ಲವೆ ?"

ಹೀಗೆಯೆ ಕೆಲವು ದಿನಗಳು ಕಳೆದುವು ; ಗೌರಿ ಸಂಪೂರ್ಣವಾಗಿ ಗುಣಹೊಂದಿ ಕೆಲಸಮಾಡಲು ಶಕ್ತಳಾದಳು. ಆದರೆ ಅವಳು ಕೆಲಸ ಮಾಡುವುದಕ್ಕೆ ಜಯಲಕ್ಷ್ಮಿ ಅವಕಾಶ ಕೊಡಬೇಕಲ್ಲ! ತನ್ನ ಸೀರೆಗಳನ್ನು ಜಯಲಕ್ಷ್ಮಿ ಒಗೆಯುತ್ತಿದ್ದುದನ್ನು ತಪ್ಪಿಸುವುದಕ್ಕೇ ಗೌರಿಗೆ ಎಷ್ಟೋ ಪ್ರಯಾಸವಾಯಿತು.

ವೆಂಕಮ್ಮನವರು ಬಹಳ ಕಾಲದ ರೂಢಿಯಿಂದಲೂ ಕೈಲಾಗದ್ದರಿಂದಲೂ ಎರಡು ಹೊತ್ತಿಗೂ ಒಟ್ಟಿಗೆ ಅಡುಗೆ ಮಾಡಿಬಿಡುತ್ತಿದ್ದರು. ಬರುಬರುತ್ತ ನಾರಾಯಣಮೂರ್ತಿ ರಾತ್ರಿಯ ಹೊತ್ತು ಮನೆಗೆ ಬರುವುದು ಬಹಳ ತಡ ವಾಗುತ್ತಿದ್ದುದರಿಂದ, ಆ ಹೊತ್ತಿನಲ್ಲಿ ಅವನು ತಂಗಳು ತಿನ್ನುವುದು ಜಯ ಲಕ್ಷ್ಮಿಗೆ ಸರಿಬೀಳಲಿಲ್ಲ. ನಾರಾಯಣಮೂರ್ತಿಗೇನೋ ತಂಗಳು ತಿನ್ನುವುದು ರೂಢಿಯಾಗಿಹೋಗಿತ್ತು: ದಿನವೊಪ್ಪೊತ್ತಿನ ತಂಗಳು ತಿನ್ನುತ್ತಿದ್ದವನಿಗೆ ಒಪ್ಪೊತ್ತಿನ ತಂಗಳು ಅಸಹ್ಯವಾಗಿರಲಿಲ್ಲ. ಅಂತೂ, ಇನ್ನುಮೇಲೆ ರಾತ್ರಿಯ ವೇಳೆ ತಾನು ಬಿಸಿಯಾಗಿ ಅಡುಗೆ ಮಾಡುವುದಾಗಿ ಜಯಲಕ್ಷ್ಮಿ ಅತ್ತೆಯ ಅಪ್ಪಣೆ ಕೇಳಿದಳು. ವೆಂಕಮ್ಮನವರು ಮೊದಲು ಬೇಡವೆಂದರು ; ಗೌರಿ, 'ಮಾಡಿಕೊಳ್ಳಲಿ ಬಿಡಮ್ಮ ; ಅವಳೇ ಮಾಡುತೀನಿ ಎನ್ನುವಾಗ ನಾವೇಕೆ ಬೇಡ ಎನ್ನಬೇಕು' ಎಂದ ಮೇಲೆ 'ಆಗಲಿ' ಎಂದು ಒಪ್ಪಿದರು. ಬೇಡ ಎನ್ನುವುದರಲ್ಲಿ, ಹೆಚ್ಚು ಖರ್ಚಾಗುತ್ತದೆಯೇನೋ ಎಂದು ವೆಂಕಮ್ಮನವರ ಎಣಿಕೆ. ಮಾಡಲಿ ಎಂದು ಹೇಳಿದ್ದರಲ್ಲಿ, ಕಾಲಕ್ರಮದಲ್ಲಿ ತನ್ನ ತಮ್ಮ ಜಯಲಕ್ಷ್ಮಿಯ ಕೆಲಸ ಕಾರ್ಯಗಳನ್ನಾದರೂ ಮೆಚ್ಚಿ ಅವಳನ್ನು "ಹೆಂಡತಿ" ಯಾಗಿ ಸ್ವೀಕರಿಸಿಯಾನೋ ಎಂದು ಗೌರಿಯ ದೂರದ ಆಸೆ.

ಜಯಲಕ್ಷ್ಮಿ ಮೊದಲನೆಯ ದಿನ ಅಡುಗೆ ಮಾಡಿದಳು. ರಾತ್ರಿ ಎಂಟು ಗಂಟೆಯ ಹೊತ್ತಿಗೇ ಅಡುಗೆಯ ಕೆಲಸವೆಲ್ಲ ಮುಗಿಯಿತು. ಜಯಲಕ್ಷ್ಮಿ ಗಂಡನ ಹಾಸಿಗೆ ಹಾಸುವುದಕ್ಕೆಂದು ಅಟ್ಟದ ಮೇಲಕ್ಕೆ ಹೋದಳು. ಆ ಹೊತ್ತಿಗೆ ಸರಿಯಾಗಿ ಅಂದು ನಾರಾಯಣಮೂರ್ತಿ ಮನೆಗೆ ಬಂದ. ಬಂದವನೇ ಕಾಲು ತೊಳೆದುಕೊಳ್ಳುದಕ್ಕೆ ಬಚ್ಚಲ ಮನೆಗೆ ಹೋದ.

ಗೌರಿಗೆ ಏನೋ ಹೊಳೆಯಿತು : ತಾಯಿಯ ಬಳಿಗೆ ಹೋಗಿ – " ಅಮ್ಮಾ, ನೀನು ಸುಮ್ಮನೆ ಒಂದು ಕಡೆ ಮಲಗಿಕೊ, ನಾಣು ಕೇಳಿದರೆ ಮೈಗೆ ಸರಿಯಿಲ್ಲ ಎಂದು ಹೇಳಿಬಿಡು " ಎಂದಳು.

" ಯಾಕೇ ?" ಎಂದರು ವೆಂಕಮ್ಮನವರು.

" ನೀನು ಸುಮ್ಮನೆ ನಾನು ಹೇಳಿದ ಹಾಗೆ ಕೇಳಬಾರದೆ ?" ಎಂದಳು ಗೌರಿ.

" ಏನೋ ಅಮ್ಮ, ಚಿಲಿಮಿಷದ ಹುಡುಗರು ನೀವು. ಏನೇ ನಿನ್ನದು ಹುಡುಗಾಟ ?" ಎಂದು ಗೌರಿಯ ಉದ್ದೇಶ ಗ್ರಹಿಸದೆ ಗೊಣಗಿದರು ಅವರು. ಕೊನೆಗೆ, ಗೌರಿ ಹೇಳಿದ ಹಾಗೆ ಕೇಳಲು ಒಪ್ಪಿಕೊಂಡರು. ಹೊರಕ್ಕೆ ಬಂದು, ಒಂದು ಚಾಪೆ ಹಾಸಿಕೊಂಡು, ಮಲಗಿದರು. ಗೌರಿ ನಾಣುವಿಗೆ ಸಂಧ್ಯಾ ವಂದನೆಗೆ ನೀರು ಇಟ್ಟು ಜಯಲಕ್ಷ್ಮಿಯ ಬಳಿಗೆ ಬಂದಳು.

ಗೌರಿ : " ಜಯ, ನೀನು ನಾನು ಹೇಳಿದ ಹಾಗೆ ಕೇಳಬೇಕು ಇವೊತ್ತು. ಇವೊತ್ತಿನಿಂದ ನೀನು ಈ ಕೋಣೆಯಲ್ಲಿ ಮಲಗಬೇಕು, ಗೊತ್ತಾಯಿತೆ ? ಈಗ ನೀನು ನಾರಾಯಣಮೂರ್ತಿಯ ಊಟ ಆಗುವವರೆಗೂ ಇಲ್ಲಿಯೇ ಇರಬೇಕು. ನಾನು ಅವನಿಗೆ ಬಡಿಸುತ್ತೇನೆ."

" ನಾನೇ ಬಡಿಸುತ್ತೇನೆ ಅತ್ತಿಗಮ್ಮ. ನನಗೆ ಎಷ್ಟೋ ಸಂತೋಷ ಆಗುತ್ತೆ. ಅವರು ನನ್ನನ್ನು ಮಾತಾಡಿಸದಿದ್ದರೂ ಚಿಂತೆಯಿಲ್ಲ, ಅವರ ಸೇವೆ ಮಾಡುವ ಪುಣ್ಯ ಸಿಕ್ಕಿದರೆ ಅಷ್ಟೇ ಸಾಕು " ಎಂದಳು. ಅವಳ ಕಣ್ಣಿನಿಂದ ಎರಡು ಕಂಬನಿಗಳುದುರಿದುವು.

ಗೌರಿಗೆ ಬಹಳ ಮರುಕವುಂಟಾಯಿತು. ಇಷ್ಟು ಚಿಕ್ಕ ಹುಡುಗಿಯ ಮನಸ್ಸಿನಲ್ಲಿ ಎಂಥ ಅನುಭವದಿಂದ ಕೂಡಿದ, ನಿಷ್ಕಲ್ಮಶವಾದ ಭಾವನೆ ತುಂಬಿದೆ, ಎಷ್ಟು ಸ್ಥೈರಣೆಯಿದೆ ಎನ್ನುವುದನ್ನು ಕಂಡು ಗೌರಿಗೆ ಆಶ್ಚರ್ಯ

ವಾಯಿತು. ರೂಪು, ರೂಪು, ರೂಪು – ರೂಪನ್ನು ಸುಡಬೇಕು; ಹೊರ ರೂಪಿಗೆ ಗಂಡಸರು ಅದೇನು ಮರುಳಾಗುತ್ತಾರೋ! ಸಾಮಾನ್ಯವಾದ ಅಂದ ವಿಲ್ಲದ ಹೂವಿನಲ್ಲಿ ಅಡಗಿರುವ ಪರಿಮಳದಂತೆ ಒಳಗೆ ಅಡಗಿರುವ ಸದ್ಗುಣದ ಸೌಂದರ್ಯ ಗಂಡಸರಿಗೆ ಕಾಣುವುದೇ ಇಲ್ಲವಲ್ಲಾ, ಛಿ! – ಎಂದುಕೊಂಡಳು ಗೌರಿ. ಸದ್ಗುಣಕ್ಕೆ ಎಂತಿದ್ದರೂ ಕೊನೆಗೆ ಜಯವೇ ಎಂಬುದಾಗಿ ಸಮಾಧಾನ ತಂದುಕೊಂಡು –

" ಜಯಲಕ್ಷ್ಮೀ, ನೀನು ಬದುಕಿರುವಷ್ಟು ದಿನವೂ ನಿನಗೆ ನಿನ್ನ ಗಂಡನ ಸೇವೆ ಮಾಡುವ ಅವಕಾಶ ಕಲ್ಪಿಸಬೇಕು ಅಂತಲೇ ನನ್ನ ದೊಡ್ಡ ಆಸೆ. ಆದರೆ ಎಲ್ಲ ನಿನ್ನ ಕೈಲಿದೆ. ಇಂದು ಮಾತ್ರ ನಾನು ಹೇಳಿದ ಹಾಗೆ ಕೇಳಿಬಿಡು. ಈ ಕೋಣೆಯಲ್ಲಿ ಮಲಗಿಕೊ. ನಾಚಿಕೆಪಡಬೇಡ. ನಾರಾಯಣಮೂರ್ತಿ ಮನ ಸೋಲದಿದ್ದರೂ, ನಿನ್ನ ಮೇಲೆ ಮರುಕಗೊಳ್ಳಬಹುದು."

" ಆಗಲಿ " ಎಂದು ಒಪ್ಪಿಕೊಂಡಳು ಜಯಲಕ್ಷ್ಮಿ.

ನಾರಾಯಣಮೂರ್ತಿ ಎಲೆಯ ಮುಂದೆ ಕುಳಿತ; ಗೌರಿ ಬಡಿಸುವುದಕ್ಕೆ ತೊಡಗಿದಳು.

" ಇದೇನು ಗೌರಿ, ನೀನು ಬಡಿಸುತ್ತೀ. ಅಮ್ಮ ಎಲ್ಲಿ?"

" ಎಲ್ಲೊ ಸ್ವಲ್ಪ ತಲೆ ನೋವಂತೆ. ಮಲಗಿದ್ದಾಳೆ."

" ಅವಳಿಗೆ ಬಡಿಸುವುದಕ್ಕೆ ಏನಾಗಿದೆಯಂತೆ?"

" ಹೇಳಿದೆನಲ್ಲ ನಾಣು, ತಲೆ ನೋವೂ ಅಂತ. ಪಾಪ ಅವಳನ್ನ ಯಾಕೆ ಎಬ್ಬಿಸಬೇಕು ಅಂತ ನಾನೇ ಬಂದೆ."

" ಅಮ್ಮನಲ್ಲ ನಾನು ಕೇಳಿದ್ದು. **ಅವಳು** – ಅವಳು ಬಡಿಸುವುದಕ್ಕೆ ಏನಾಗಿತ್ತೂ ಅಂತ."

" ಓ, ಹಾಗೋ. ಬಡಿಸು ಅಂದರೆ ಬಡಿಸುತ್ತಾಳೆ. ಅದಕ್ಕೇನು? ನಿನಗೆ ಬಡಿಸುವುದಕ್ಕೇ ಅವಳು ಇಲ್ಲಿಗೆ ಬಂದಿರುವುದು. ನಾಳೆಯಿಂದ ಅವಳೇ ಬಡಿಸುತ್ತಾಳೆ. ಈಗಲೇ ಬೇಕಾದರೂ ಬಡಿಸುತ್ತಾಳೆ. ನಿನ್ನ ಹಾಸಿಗೆ ಹಾಸುತ್ತಿದ್ದಾಳೆ. ಕರೆಯಲೇನು?"

" ಅಲ್ಲ, ಸುಮ್ಮನೆ ಹೇಳಿದೆ ಅಷ್ಟೆ."

**ನಾರಾಯಣಮೂರ್ತಿ ಅನ್ನಕ್ಕೆ ಕೈಯಿಟ್ಟ.**

"ಇದೇನು, ಬಿಸಿ ಅಡಿಗೆ ಇವೊತ್ತು ?"

"ಏನೋ ನೀನು ಬರುವುದು ಬಹಳ ಹೊತ್ತಾಗುತ್ತೆ. ಕಷ್ಟಪಟ್ಟು ದುಡಿಯುವವನು. ತಂಗಳೇಕಪ್ಪ ತಿನ್ನಬೇಕು. ಇನ್ನು ಮೇಲೆ ರಾತ್ರಿಯೂ ಬಿಸಿಯಾಗಿಯೇ ಮಾಡುವುದು ಅಂತ ಮಾಡಿಕೊಂಡಿದೆ. ಏನೋ ಸ್ವಲ್ಪ ಹೆಚ್ಚು ಖರ್ಚಾಗಬಹುದು. ಮಾಡಬಹುದು ತಾನೆ ?"

"ಆಕ್ಷೇಪಣೆಗಲ್ಲ ಗೌರಿ, ಸುಮ್ಮನೆ ಕೇಳಿದೆ, ಅಷ್ಟೆ. ಅಲ್ಲ, ಒಂದು ಹೊತ್ತು ಬೇಯಿಸಿ ಹಾಕುವುದೇ ಕಷ್ಟ ಪಾಪ ಅಮ್ಮನಿಗೆ. ಇನ್ನು ಎರಡು ಹೊತ್ತೂ ಮಾಡುವುದಕ್ಕಾಗುತ್ತೆಯೆ, ಪಾಪ."

"ಅಮ್ಮ ಯಾಕೆ ಮಾಡಬೇಕು ? ನಾನೇ ಮಾಡುತ್ತೇನೆ."

ನಾರಾಯಣಮೂರ್ತಿ ಸುಮ್ಮನಿದ್ದ; ಎರಡು ಮೂರು ತುತ್ತು ಬಾಯಿಗಿಟ್ಟ; ಸ್ವಲ್ಪ ಚಟ್ನಿ ನಂಜಿಕೊಂಡ.

"ಏನು, ಇವೊತ್ತೆ ಮೊದಲುಮಾಡಿಬಿಟ್ಟೆಯೊ? ನೀನು ಮಾಡಿದೆಯೇನು ಗೌರಿ, ಅಡಿಗೆ? ಅದಕ್ಕೇ ಇವೊತ್ತು ಈರುಳ್ಳಿ ಚಟ್ನಿ . . . ಬಹಳ ಸೊಗಸಾಗಿದೆ. ಎಲ್ಲಿ, ಇನ್ನಷ್ಟು ಹಾಕು. ಸಾರಂತೂ ಬಹು ಸೊಗಸಾಗಿದೆ . . . ಅಮ್ಮ ಮಾಡುವ ಸಾರೇ ಚೆನ್ನು ಅಂತಿದ್ದೆ. ಅದನ್ನ ಮೀರಿಸಿದೆ ಇದು. ಇನ್ನು ಮೇಲೆ ರಾತ್ರಿಯ ಹೊತ್ತು ಸಾರನ್ನಾದರೂ ನೀನೇ ಮಾಡಿಬಿಡು, ಗೌರಿ. ಬಹಳ ಚೆನ್ನಾಗಿದೆ."

"ನಿನ್ನ ಹೊಗಳಿಕೆಯೆಲ್ಲ ಗೊತ್ತಿದೆ, ಬರಿಯ ಹಾಸ್ಯ."

"ನನ್ನಾಣೆಗೂ ಚೆನ್ನಾಗಿದೆ ಗೌರಿ. ಈಗ ಎರಡನೆಯ ಸಲ ಚಟ್ನಿಯಲ್ಲಿ ಕಲಸಲೋ ಸಾರಿನಲ್ಲಿ ಕಲಸಲೋ ಅಂತ ಅನುಮಾನವಾಗಿಬಿಟ್ಟಿದೆ."

ನಾರಾಯಣಮೂರ್ತಿ ಎರಡು ಸಲ ಸಾರಿನಲ್ಲಿ ಕಲಸಿ ಹೊಡೆದುಬಿಟ್ಟ. ಚಟ್ನಿಯಲ್ಲೂ ಕಲಸಿದ, ಬಿಡಲಿಲ್ಲ. ಎಂದಿಗಿಂತ ಸ್ವಲ್ಪ ಹೆಚ್ಚಾಗಿಯೆ ಊಟ ಮಾಡಿದ್ದ ಅವನು.

ನಾಣು ಮಜ್ಜಿಗೆಯಲ್ಲಿ ಊಟಮಾಡುತ್ತಿದ್ದ.

"ನಿಜವಾಗಿಯೂ ಅಡಿಗೆ ಚೆನ್ನಾಗಿದೆಯೆ ನಾಣು ?"

"ಭೇಷಾಗಿದೆ. ನಿನಗೆ ಏನು ಬಹುಮಾನ ಕೊಡಲಿ, ಹೇಳು."

"ಬಹುಮಾನ ಅಡಿಗೆ ಮಾಡಿದವರಿಗೆ, ಬಡಿಸಿದವರಿಗಲ್ಲ."

"ಓಹೋ, ಹಾಗಾದರೆ ಅಮ್ಮನ ಕೈವಾಡ ಅನ್ನು. ಒಂದು ಸಲ ನನಗೂ ಹಾಗೆಯೇ ಅನ್ನಿಸಿತು. ಆದರೆ, ಈರುಳ್ಳಿ ವಾಸನೆ ಕಂಡರೇ ಆಗದೆ ಇದ್ದವಳು ಅದರ ಚಟ್ನಿ ಹೇಗೆ ಮಾಡಿದ್ದಾಳೂ ಅಂತ ಆಶ್ಚರ್ಯವಾಯಿತು. ಪಾಪ, ಅಮ್ಮ ನನ್ನ ಬಹುಮಾನ ಕಟ್ಟಿಕೊಂಡು ಏನು ಮಾಡಿಯಾಳು!"

"ಅಮ್ಮನದಲ್ಲ, ಅಡಿಗೆ. ಜಯಲಕ್ಷ್ಮಿಯದು."

"ಆ!" ಎಂದು ಬಾಯಿಬಿಟ್ಟ, ಅಷ್ಟೆ.

ಗೌರಿ ಸಂದರ್ಭ ಸರಿಯಾಗಿದೆಯೆಂದು ತಮ್ಮನಿಗೆ ಎರಡು ಮಾತು ಹೇಳಿದಳು:

"ನಾಣು, ಈಗ ಮನೆಗೆಲಸವೆಲ್ಲ ಅವಳದ್ದೆ. ಬೆಳಗ್ಗೆ ಅಡಿಗೆ ಎಷ್ಟೋ ಅಷ್ಟೆ ಅಮ್ಮನ ಕೆಲಸ. ನಿನ್ನ ಮುಂದೆ ಹೊಗಳುವುದಕ್ಕೆ ನಾನು ಹೇಳುವುದಿಲ್ಲ. ಜಯಲಕ್ಷ್ಮಿಯಂಥ ಬುದ್ಧಿವಂತೆ, ಗುಣವಂತೆ – ಎಲ್ಲಿಯೂ ಸಿಕ್ಕಲಾರಳು. ಬಣ್ಣವೊಂದು ಕಪ್ಪಾದ ಮಾತ್ರಕ್ಕೆ ಅವಳಿಗೆ ರೂಪಿಲ್ಲವೆಂದು ತಿಳಿದೆಯಾ? ಕಣ್ಣು ಮೂಗು ಬಾಯಿ ಮುಖ ಅವಳಿಗೆ ನೇರವಾಗಿರುವಷ್ಟು ನನಗೂ ಇಲ್ಲ, ನಿನಗೂ ಇಲ್ಲ. ನೀನು ಅವಳನ್ನು ಮೆರಸಬೇಡ, ಮುದ್ದಿಸಬೇಡ. ಅವಳನ್ನು ಪ್ರೀತಿಸಲೂಬೇಡ. ಆದರೆ, ಅವಳನ್ನು ದ್ವೇಷಿಸಬೇಡ; ಈಗ ಅವಳನ್ನು ಕಡೆಗಾಣುತ್ತಿರುವಂತೆ ಕಸಕ್ಕಿಂತ ಕಡೆಯಾಗಿ ಕಾಣಬೇಡ. ಅವಳು ಬರಿಯ ಹೆಣ್ಣು ಮಾತ್ರವಲ್ಲ ನಾಣು, ನಿನ್ನ ಭಾಗ್ಯಲಕ್ಷ್ಮಿ. ಅವಳ ಹೊಟ್ಟೆ ಉರಿಸಿದರೆ ಅವಳು ನಿನ್ನ ಮನೆ ಬಿಟ್ಟು ತೊಲಗುತ್ತಾಳೆ. ನೀನು ಮತ್ತೆ ದರಿದ್ರನಾಗುತ್ತಿ. ನಾನು ಹೇಳಿದ್ದನ್ನು ಸ್ವಲ್ಪ ಯೋಚಿಸಿ ನೋಡು. ಜಯನ ಕಡೆಗೆ ಸ್ವಲ್ಪ ತಲೆಯೆತ್ತಿ ನೋಡು."

ನಾರಾಯಣಮೂರ್ತಿ ಮೌನವಾಗಿ ಗೌರಿ ಹೇಳಿದ್ದೆಲ್ಲವನ್ನೂ ಕೇಳಿದ. ಅವನು ಮರುಮಾತಾಡದೆ ಇದ್ದುದನ್ನು ಕಂಡು, ತನ್ನ ಮಾತು ಅವನ ಮೇಲೆ ಸ್ವಲ್ಪ ಪರಿಣಾಮ ಉಂಟುಮಾಡಿರಬೇಕೆಂದು ಗೌರಿಗೆ ಸಮಾಧಾನವಾಯಿತು.

೧೯

## ಆನಂದಬಾಷ್ಪ

ನಾರಾಯಣಮೂರ್ತಿಯ ಊಟ ಮುಗಿಯುವ ಹೊತ್ತಿಗೆ ಜಯಲಕ್ಷ್ಮಿ ಅಟ್ಟದ ಮೇಲೆ ಅವನ ಹಾಸಿಗೆಯನ್ನು ಅಚ್ಚುಕಟ್ಟಾಗಿ ಹಾಸಿ, ಅವನು ಎಲ್ಲೆಲ್ಲೋ ಬೀಸಾಡಿದ್ದ ಅವನ ಬಟ್ಟೆಬರೆಗಳನ್ನು ಮಡಿಸಿ ಒಂದು ಕಡೆ ಇಟ್ಟು, ಹಾಸಿಗೆಯ ಬಳಿ ಒಂದು ತಟ್ಟೆಯಲ್ಲಿ ಎಲೆಯಡಕೆ ಇರಿಸಿದ್ದಳು. ತನ್ನ ಕೆಲಸ ಮುಗಿದ ಕೂಡಲೆ ಕೆಳಕ್ಕೆ ಬಂದು ಕುಳಿತಳು.

ನಾಣುವಿನ ಊಟ ಮುಗಿಯಿತು. ಅವನು ಕೈ ತೊಳೆದುಕೊಂಡು ಅಟ್ಟದ ಮೇಲಕ್ಕೆ ಹೋದ ತರುವಾಯ, ಜಯಲಕ್ಷ್ಮಿ ಅಡುಗೆ ಮನೆಗೆ ಹೋಗಿ ತನ್ನ ಊಟಕ್ಕೆ ಬಡಿಸಿಕೊಂಡಳು. ಆ ವೇಳೆಯಲ್ಲಿ ಗೌರಿ, ತಾನು ಮೊದಲೇ ಉದ್ದೇಶಿಸಿಕೊಂಡಿದ್ದಂತೆ, ತನ್ನ ಹಾಸಿಗೆಯನ್ನು ಕೋಣೆಯಿಂದ ಹಜಾರಕ್ಕೆ ತಂದು ಇಟ್ಟುಕೊಂಡು, ಜಯಲಕ್ಷ್ಮಿಯ ಹಾಸಿಗೆಯನ್ನು ಅಲ್ಲಿ ಹಾಸಿದಳು.

ಜಯಲಕ್ಷ್ಮಿ ತನ್ನ ಊಟ ಮುಗಿಸಿಕೊಂಡು, ಹಜಾರಕ್ಕೆ ಬಂದಾಗ ತನ್ನ ಹಾಸಿಗೆ ಅಲ್ಲಿ ಇರಲಿಲ್ಲ ; ಕೋಣೆಯಲ್ಲಿ ಹಾಸಿತ್ತು. ಅವಳಿಗೆ ಎಲ್ಲವೂ ಅರ್ಥ ವಾಯಿತು. ಗೌರಿಯ ಕಡೆಗೆ ಒಮ್ಮೆ ಕೃತಜ್ಞತೆಯ ನೋಟವನ್ನು ಬೀರಿ, ಕೋಣೆಯನ್ನು ಹೊಕ್ಕು ಬಾಗಿಲು ಹಾಕಿಕೊಂಡಳು.

ಕೋಣೆಯ ಬಾಗಿಲು ಹಾಕಿದ ಶಬ್ದ ಕೇಳಿ, 'ಇದೇನು, ಎಂದೂ ಇಲ್ಲದ್ದು ಇವೊತ್ತು ಗೌರಿ ಬಾಗಿಲು ಹಾಕಿಕೊಂಡಿದ್ದಾಳೆ' ಎಂದು ಮನದಲ್ಲೆ ಆಶ್ಚರ್ಯಪಟ್ಟು, ಹಾಗೆಯೇ ಮಲಗಿಕೊಂಡ ನಾರಾಯಣಮೂರ್ತಿ.

ಜಯಲಕ್ಷ್ಮಿಯೂ ಮಲಗಿಕೊಂಡಳು.

ಅಟ್ಟದ ಮೇಲೆ ದೀಪ ಸಣ್ಣದಾಗಿ ಉರಿಯುತ್ತಲೇ ಇತ್ತು. ನಾರಾಯಣ ಮೂರ್ತಿ ಜಯಲಕ್ಷ್ಮಿಯ ವಿಚಾರವಾಗಿ ಗೌರಿ ಹೇಳಿದ ಮಾತುಗಳನ್ನು ಮೆಲಕುಹಾಕುತ್ತ ಮಲಗಿದ್ದ. ಅವಳು ಹೇಳಿದ್ದೆಲ್ಲವೂ ನ್ಯಾಯವಾಗಿಯೇ ಕಂಡಿತು. ನಿಷ್ಪಕ್ಷಪಾತದೃಷ್ಟಿಯಿಂದ ಜಯಲಕ್ಷ್ಮಿಯ ರೂಪ ನಡತೆ ಮುಂತಾಗಿ ಅವಳ ಸರ್ವಸ್ವವನ್ನೂ ಇಂದು ವಿಮರ್ಶಿಸಿ, ತನ್ನ ನ್ಯಾಯಬುದ್ಧಿ ಯಾವ ರೀತಿ ಹೇಳುತ್ತದೆಯೋ ಹಾಗೆ ಇನ್ನು ಮುಂದೆ ವರ್ತಿಸುವುದಾಗಿ

ನಿಶ್ಚಯಿಸಿ, ಕಣ್ಮುಚ್ಚಿ ಆಲೋಚನಾಪರನಾದ. ಅವಳ ನಡತೆಯಲ್ಲಿ, ಕೆಲಸಗಳಲ್ಲಿ, ಯಾವ ತಪ್ಪೂ ಅವನಿಗೆ ಕಂಡುಬಂದಿರಲಿಲ್ಲ: ಅವನ್ನು ನಿಜವಾಗಿಯೂ ಮೆಚ್ಚಲೇ ಬೇಕು ಎಂದುಕೊಂಡ. ಇದುವರೆಗೆ ದೂರವಿದ್ದ ಜಯಲಕ್ಷ್ಮಿ ತನ್ನ ಸಮೀಪಕ್ಕೆ ಬಂದಂತಾಯಿತು. ಅವಳು ಮದುವೆಯಲ್ಲಿ ಹೇಗೆ ಹೇಗೋ ಇದ್ದಳು; ರೋಷಾವೇಶದಲ್ಲಿ ಕಪ್ಪು ಇಮ್ಮಡಿಯಾಗಿ ಕಂಡಿತ್ತು; ಆ ಕಪ್ಪಿನ ಮುಸುಕಿನಲ್ಲಿ ಅವಳ ಇತರ ಸೌಂದರ್ಯಾಂಶಗಳು ಎಲ್ಲಾ ಮರೆಯಾಗಿ ಹೋಗಿದ್ದುವು. ಈಗ ನಿಷ್ಪಕ್ಷಪಾತವಾಗಿ ನೋಡಹೊರಟರೆ, ಅವಳು ತಾನು ಬಗೆದಿದ್ದಷ್ಟು ಕಪ್ಪಾಗಿರುವಂತೆ ತೋರುವುದಿಲ್ಲ; ಅವಳ ಕಪ್ಪಿನಲ್ಲೇ ಒಂದು ಸೊಬಗು, ಸಿರಿ ಇರುವಂತೆ ತೋರುತ್ತದೆ; ಅವಳ ಮುಖ ಶ್ಯಾಮಲವಾಗಿರುವುದರಿಂದಲೇ ಅವಳ ಕಣ್ಣುಗಳು ಅಷ್ಟು ಹೊಳಪಾಗಿ, ಕೂರ್ಪಾಗಿ, ಕಾಣುತ್ತಿವೆ; ಆ ಕಣ್ಣುಗಳ ತಣ್ಬೆಳಕಿನಲ್ಲಿ ತನಿಯೊಲವು ಸೂಸುತ್ತಿವೆ, ಆ ಬೆಳಕಿಗೆ ದೈನ್ಯತೆ ಒಂದು ಬಣ್ಣ ಕೊಟ್ಟಿದೆ. ಅವಳ ಮೈ ಎಷ್ಟು ತುಂಬಿಕೊಂಡಿದೆ! ಕಪ್ಪಾದ ಮಾತ್ರಕ್ಕೆ ಆ ಮೈಯ ಕೋಮಲತೆ ಎಲ್ಲಿ ಹೋಯಿತು? ಅವಳ ಬಣ್ಣ ಕಪ್ಪಗಿದ್ದರೇನು, ಮನಸ್ಸು ಕಪ್ಪೇ, ಗುಣ ಕಪ್ಪೇ, ಹೃದಯ ಕಪ್ಪೇ? ಅವಳ ಮನಸ್ಸು ನಿಷ್ಕಲ್ಮಶವಾಗಿರಬಹುದು, ಅವಳಲ್ಲಿ ಗುಣ ಮನೆಮಾಡಿಕೊಂಡಿರಬಹುದು, ಅವಳ ಹೃದಯ ಒಲವಿನಿಂದ ತುಂಬಿ ತುಳುಕುತ್ತಿರಬಹುದು. ಒಲವು, ಹೌದು, ಒಲವು; ಮನುಷ್ಯನ ಬಾಳು ಸಾರ್ಥಕವಾಗಬೇಕಾದರೆ ಅವನಿಗೆ ಒಲವು ಬೇಕು; ಜಯಲಕ್ಷ್ಮಿ ತನ್ನನ್ನು ಒಲಿದಿರಬಹುದು; ತಾನು ಅವಳ ಒಲವನ್ನು ಸುಲಭವಾಗಿ ಸಂಪಾದಿಸಬಹುದು. ಆದರೆ, ಅವಳ ಹೃದಯವನ್ನು ತಾನು ಕಾಣಬೇಕಾದರೆ, ಅವಳ ಒಲವನ್ನು ತಾನು ಸಂಪಾದಿಸಬೇಕಾದರೆ, ತನ್ನ ಹೃದಯವನ್ನು ಅವಳಿಗೆ ಒಪ್ಪಿಸಬೇಡವೆ, ತನ್ನ ಒಲವನ್ನು ಅವಳಿಗೆ ಎರೆಯಬೇಡವೆ? ಹೌದು, ಹಾಗೆ ಮಾಡಬೇಕು. ಆದರೆ, ಹಾಗೆ ಮಾಡುವುದೆಂತು? ಇಷ್ಟು ದಿನ ಅವಳನ್ನು ನಾಯಿಯಂತೆ ಕಡೆಗಂಡು, ಈಗ ನಿನ್ನನ್ನು ಒಲಿಯಲು ಇಷ್ಟಪಡುತ್ತೇನೆ ಎಂದು ಯಾವ ನಾಲಗೆಯಲ್ಲಿ ಹೇಳುವುದು? ಹಾಗೆ ಹೇಳುವ ಮುನ್ನ ಅವಳ ಕ್ಷಮೆ ಬೇಡುವುದು ಒಳ್ಳೆಯದು . . . ಹೀಗೆ ಆಲೋಚಿಸುತ್ತ ಆಲೋಚಿಸುತ್ತ ತುಸ ಜೋಂಪು ಹತ್ತಿತು; ಕಣ್ಣು ಮುಚ್ಚಿ, ಎಚ್ಚರಕ್ಕೂ ನಿದ್ರೆಗೂ ನಡುವಣ ಸ್ಥಿತಿಯಲ್ಲಿ ಒಂದು

ಬಗೆಯ ಕನಸು ಕಾಣುತ್ತಿದ್ದ. ಆ ಕನಸು ಅವನ ಆಲೋಚನೆಯ ಎಳೆಯನ್ನೇ ಹಿಡಿದು ಸಾಗತೊಡಗಿತು: ಅವನು ಜಯಲಕ್ಷ್ಮಿಯ ಕ್ಷಮೆ ಬೇಡಿ ಅವಳ ಮನವೊಲಿಸಿಕೊಳ್ಳಲು ಹೋದ. ಇವನು ಅವಳ ಕ್ಷಮೆ ಬೇಡುವ ಮುನ್ನ ಅವಳೇ ಇವನ ಕ್ಷಮೆ ಬೇಡಿ, ಇವನ ಕಾಲ ಮೇಲೆ ತನ್ನ ತಲೆಯೊರಗಿಸಿದ್ದಳು . . . ನಾರಾಯಣಮೂರ್ತಿ ಹಾಸಿಗೆಯ ಮೇಲೆ ಮಲಗಿಕೊಳ್ಳುವ ಮುನ್ನ ದೀಪ ಆರಿಸಿರಲಿಲ್ಲ, ಹೊದ್ದಿಕೆ ಹೊದ್ದುಕೊಂಡಿರಲಿಲ್ಲ; ಒಂದು ಸಲ ಸ್ವಲ್ಪ ಜೋರಾಗಿ ಗಾಳಿ ಬೀಸಿತು; ಅವನಿಗೆ ಎಚ್ಚರವಾಯಿತು; ಕಣ್ಣು ಬಿಟ್ಟು, ಸುತ್ತ ನೋಡಿದ; ದೀಪ ಉರಿಯುತ್ತಿತ್ತು; ಏಳಹೋದ, ಅಡಿಗಳ ಮೇಲೆ ಏನೋ ಭಾರ ಹೇರಿದ್ದಂತೆ ಇತ್ತು; ಕೈಯೂರಿಕೊಂಡು ಎದ್ದು ಕುಳಿತು ನೋಡಿದ: ಯಾರದು ತನ್ನ ಪಾದಗಳ ಮೇಲೆ ಮಸ್ತಕವಿಟ್ಟು ಮಲಗಿರುವವರು? . . . ಜಯಲಕ್ಷ್ಮಿ! ಜಯಲಕ್ಷ್ಮಿಯೆ? ಹೌದು, ಜಯಲಕ್ಷ್ಮಿ! ಇದೇನು, ಕನಸೋ ತಾನು ಕಾಣುತ್ತಿರುವುದು? ಕನಸಲ್ಲ! ಈಗತಾನೆ ಎದ್ದು ಕುಳಿತಿರುವುದರಿಂದ ಕನಸೆಲ್ಲಿ ಆದೀತು. ಮೆಲ್ಲನೆ ಮುಟ್ಟಿ ನೋಡಿದ . . . ಕನಸಲ್ಲವೆಂದು ದೃಢವಾಯಿತು. ಏನು ಮಾಡುವುದು ಈಗ? ಅವಳು ಏಕೆ ಹೀಗೆ ಮಲಗಿದ್ದಾಳೆ? ತತ್‌ಕ್ಷಣ ರೋಷ ಚಿಮ್ಮಿತು; ಮರುಕ್ಷಣವೇ ಕನಸಿನ ನೆನಪಾಯಿತು, ತನ್ನ ನಿದ್ದೆಯ ಮುನ್ನಿನ ಆಲೋಚನೆಯ ಅಂಕುಶದ ವೇದನೆಯಾಯಿತು; ರೋಷ ಅಡಗಿತು; ಕನಿಕರ ಮೂಡಿತು.

ಕನಿಕರ ಒಲವಿನ ಕೆಳ ಮೆಟ್ಟಲು ಮಾತ್ರ.

ನಾರಾಯಣಮೂರ್ತಿ ಮೆಲ್ಲನೆ ತನ್ನ ಕಾಲುಗಳನ್ನು ಎಳೆದುಕೊಂಡ; ಎದ್ದು ಜಯಲಕ್ಷ್ಮಿಯನ್ನು ಹಾಸಿಗೆಯ ಮೇಲೆ ಒಕ್ಕಡೆ ಮಲಗಿಸಿದ.

ಬಹಳ ಹೊತ್ತು ಕಳೆದ ಮೇಲೆ ಜಯಲಕ್ಷ್ಮಿಗೆ ತಟ್ಟನೆ ಎಚ್ಚರವಾಯಿತು. ಕಣ್ಣು ಬಿಟ್ಟು ನೋಡುತ್ತಾಳೆ, – ಇದೇನಿದು! ಗಂಡನ ಪಕ್ಕದಲ್ಲಿ ಒಂದೇ ಹಾಸಿಗೆಯ ಮೇಲೆ, ಅದೂ ಅವನ ತೋಳ ತಬ್ಬಿನಲ್ಲಿ, ಮಲಗಿದ್ದೇನೆ! – ಎಂದು ಅವಳಿಗೆ ದಿಗ್ಭ್ರಮೆಯಾಯಿತು. ತಾನು ಧೈರ್ಯಮಾಡಿ ಮೇಲಕ್ಕೆ ಬಂದದ್ದು ಖಂಡಿತವಾಗಿಯೂ ಅವನ ಬಳಿ ಮಲಗುವುದಕ್ಕಲ್ಲ; ಅವನ ಪಾದಕ್ಕೆ ಬಿದ್ದು ತನ್ನನ್ನು ಸ್ವೀಕರಿಸಬೇಕೆಂದು ಬೇಡಿಕೊಳ್ಳುವುದಕ್ಕೆ; ಬಂದಾಗ ನಾರಾಯಣಮೂರ್ತಿ ನಿದ್ದೆಮಾಡುತ್ತಿದ್ದ; ಅವನ ಪಾದಸೇವೆಯಾದರೂ

ಲಭಿಸಲಿ ಎಂದು ಕಾಲೊತ್ತುತ್ತ ಕುಳಿತಳು ; ದುಃಖ ಮಿಶ್ರಿತವಾದ ಆನಂದದ ಭಾವ ಅವಳ ಎದೆಯನ್ನು ಒತ್ತತೊಡಗಿತು ; ಕಂಬನಿ ಉಕ್ಕಿತು ; ಉದ್ವೇಗ ಹೆಚ್ಚಿತು ; ತನಗೂ ಹಾಗೆಯೇ ನಿದ್ದೆ ಬಂದುಬಿಟ್ಟಿದೆ ; ನಿದ್ದೆ ಬಂದದ್ದರ ಅರಿವೇ ಇಲ್ಲ ; ಈಗ ಅವನ ಪಕ್ಕದಲ್ಲಿ ಮಲಗಿರುವುದಂತೂ ವಿಚಿತ್ರವಾಗಿದೆ! ಅವನೇ ತನ್ನನ್ನು ಹಾಗೆ ಮಲಗಿಸಿರಬೇಕು. . . . ಇದ್ದಕ್ಕಿದ್ದ ಹಾಗೆ ಜಯಲಕ್ಷ್ಮಿಯ ಕಣ್ಣುಗಳ ತುಂಬ ಕಣ್ಣೀರು ತುಂಬಿ ಕೋಡಿವರಿಯಿತು. ದುಃಖದ ಕಂಬನಿಯಲ್ಲ, ಆನಂದಬಾಷ್ಪ. ತಾನು ಇನ್ನು ಧನ್ಯೆ ಎಂದುಕೊಂಡಳು. ಮನಸ್ಸಿಲ್ಲದ ಮನಸ್ಸಿನಿಂದ ಪತಿಯ ತೋಳ್-ಸೆರೆಯನ್ನು ಬಿಡಿಸಿಕೊಂಡು, ಅವನಿಗೆ ಸರಿಯಾಗಿ ಹೊದ್ದಿಕೆ ಹೊದಿಸಿ, ಅಟ್ಟದಿಂದ ಕೆಳಗಿಳಿದು ಬಂದು ತನ್ನ ಹಾಸಿಗೆಯ ಮೇಲೆ ಮಲಗಿಕೊಂಡಳು.

ಬೆಳಗ್ಗೆ ನಾರಾಯಣಮೂರ್ತಿ ಹೊತ್ತಿಗೆ ಮುಂಚೆಯೇ ಎದ್ದ ; ಪಕ್ಕದಲ್ಲಿ ಜಯಲಕ್ಷ್ಮಿ ಇರಲಿಲ್ಲ. ತನಗಿಂತ ಮುಂಚೆಯೇ ಎದ್ದುಹೋಗಿರಬೇಕೆಂದು ಎಣಿಸಿದ.

ಬೆಳಗಾಗ ಗೌರಿ ಜಯಲಕ್ಷ್ಮಿಯ ಮುಖ ಕಂಡೊಡನೆಯೇ, "ನಿನ್ನ ಸಾಹಸದ ಫಲ ಏನಾಯಿತು ?" ಎಂದು ಕೇಳುವಂತೆ ಕುತೂಹಲದ ದೃಷ್ಟಿಯನ್ನು ಅವಳ ಕಡೆಗೆ ಬೀರಿದಳು. ಗೌರಿಯ ದೃಷ್ಟಿಯ ಅರ್ಥವನ್ನು ಅರಿತು ಜಯಲಕ್ಷ್ಮಿ ಮುಗುಳುನಗೆಯಿಂದ ಉತ್ತರ ಕೊಟ್ಟಳು.

## ೨೦

### ಕಷ್ಟಪಟ್ಟ ಮೇಲೆ ಅನುಭವಿಸುವ ಸುಖದ ಬೆಲೆ ಹೆಚ್ಚು

ಮಾರನೆಯ ರಾತ್ರಿ ನಾರಾಯಣಮೂರ್ತಿ ಹೊತ್ತಿಗೆ ಮುಂಚೆಯೇ ಮನೆಗೆ ಬಂದ. ಅಂದೂ ಜಯಲಕ್ಷ್ಮಿಯೇ ಅಡುಗೆ ಮಾಡಿದ್ದಳು. ಹಿಂದಿನ ರಾತ್ರಿ ನಡೆದಿದ್ದ ಸಂಗತಿಗಳೆಲ್ಲವನ್ನೂ ಜಯಲಕ್ಷ್ಮಿ ಗೌರಿಗೆ ಸೂಕ್ಷ್ಮವಾಗಿ ವಿವರಿಸಿದ್ದಳು ; ಇದೆಲ್ಲವನ್ನೂ ಗೌರಿಯಿಂದ ವೆಂಕಮ್ಮನವರು ಅರಿತಿದ್ದರು. ಜಯಲಕ್ಷ್ಮಿಗೆ ತಾನೇ ಗಂಡನಿಗೆ ಬಡಿಸಬೇಕೆಂಬ ಅಪೇಕ್ಷೆಯಿತ್ತು. ಆದರೆ, ವೆಂಕಮ್ಮನವರು ತಾವೇ ಬಡಿಸುವುದಾಗಿ ಹೇಳಿದರು. ಬಡಿಸುವಾಗ ಮಗನ ಕೂಡ ಒಂದೆರಡು ಮಾತಾಡಬೇಕೆಂಬುದು ಅವರ ಆಶಯವಾಗಿತ್ತು.

ಮಗ ಊಟಕ್ಕೆ ಕುಳಿತಾಗ ವೆಂಕಮ್ಮನವರು ಆ ಮಾತು ಈ ಮಾತು ಆಡುತ್ತ ಮೆಲ್ಲನೆ ಜಯಲಕ್ಷ್ಮಿಯ ಮಾತೆತ್ತಿದರು ; ಜಯಲಕ್ಷ್ಮಿಯ ಹೆಸರು ಕೇಳಿದ ಕೂಡಲೆ ರೇಗುತ್ತಿದ್ದ ಅವನು ಇಂದು ಸಮಾಧಾನವಾಗಿದ್ದ. ಮಗ ಸುಮುಖನಾಗಿದ್ದಾನೆಂದು ಅರಿತು ತಾಯಿ ತಮ್ಮ ಮುಖ್ಯಾಶಯವನ್ನು ತಿಳಿಸಿದರು :

"ನಾಣು, ಇನ್ನು ಹೀಗೆಯೇ ಸುಮ್ಮನಿರುವುದು ಚೆನ್ನಲ್ಲ. ಶಾಸ್ತ್ರವೂ ನಡೆದುಹೋಗಲಿ. ನಾಳೆಯೇ ನಾಗಪ್ಪನವರಿಗೆ ಕಾಗದ ಹಾಕಿಬಿಡು. ಸಂಕೋಚಪಟ್ಟುಕೊಂಡರೆ ಆಗುವುದಿಲ್ಲ. ಇನ್ನು ಯಾರೂ ಇಲ್ಲ ಬರೆಯುವವರು. ನೀನೇ ಒಂದು ಪಂಕ್ತಿ ಬರೆದುಹಾಕಿಬಿಡು."

ನಾರಾಯಣಮೂರ್ತಿ ಮೌನವಾಗಿದ್ದ.

"ಯಾಕೆ, ಅನುಮಾನವೇನು ?" ಎಂದು ಕೇಳಿದರು ಅವರು.

"ಆಗಲಿ" ಎಂದ ಅವನು.

ವೆಂಕಮ್ಮನವರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

ಊಟ ಆದ ಕೂಡಲೆ ನಾರಾಯಣಮೂರ್ತಿ ಹೋಗಿ ಹಾಸಿಗೆಯ ಮೇಲೆ ಉರುಳಿಕೊಂಡು, ಕೈಲಿ ಒಂದು ಪುಸ್ತಕ ಹಿಡಿದುಕೊಂಡು ಓದ ತೊಡಗಿದ. ಆದರೆ ಓದು ಮುಂದಕ್ಕೆ ಸಾಗದೆಹೋಯಿತು. ನಿನ್ನೆಯಂತೆಯೇ ಜಯಲಕ್ಷ್ಮಿ ಬರಬಹುದೇನೋ ಎಂದು ನಿರೀಕ್ಷಿಸುತ್ತಿದ್ದ. ಅವಳು ಬಂದರೆ,

ಇಂದು ಎಚ್ಚರವಾಗಿದ್ದು ಅವಳೊಡನೆ ಒಂದೆರಡು ಮಾತಾಡಬೇಕೆಂದು ಮಾಡಿಕೊಂಡಿದ್ದ.

ಜಯಲಕ್ಷ್ಮಿ ತನ್ನ ಊಟ ಮುಗಿಸಿಕೊಂಡು ಕೋಣೆಗೆ ಬಂದಳು. ಅವಳು ಕೋಣೆಯ ಬಾಗಿಲು ಹಾಕಿಕೊಂಡ ಸದ್ದು ನಾರಾಯಣಮೂರ್ತಿಗೆ ಕೇಳಿಸಿತು.

ಜಯಲಕ್ಷ್ಮಿ ಮೊದಲು ತನ್ನ ಹಾಸಿಗೆಯ ಮೇಲೆ ಮಲಗಿಕೊಂಡಳು. ಆದರೆ ಅವಳ ಮನಸ್ಸೆಲ್ಲ ನಾರಾಯಣಮೂರ್ತಿಯ ಮೇಲೆಯೆ ಇತ್ತು. ಅವನು ಎಚ್ಚರವಾಗಿರುವಾಗಲೇ ಇಂದು ಅವನ ಬಳಿ ಹೋಗಬೇಕೆಂದು ಅವಳು ನಿರ್ಧರಿಸಿಕೊಂಡಿದ್ದಳು. ಆದರೆ ಹಾಗೆ ಮಾಡಲು ಏಕೋ ತಕ್ಕಷ್ಟು ಧೈರ್ಯ ಬಾರದೆಹೋಯಿತು. ಹಿಂದಿನ ರಾತ್ರಿಯ ತನ್ನ ವರ್ತನೆಯ ಬಗ್ಗೆ ಪತಿಯೇನಾದರೂ ಕೋಪಿಸಿಕೊಂಡಿದ್ದರೆ ಮಾತ್ರ ತನ್ನ ಆಸೆಯೆಲ್ಲ ಮಣ್ಣುಗೂಡಿದ ಹಾಗೆಯೇ ಎಂದು ಬಗೆದಳು. ಆದರೆ ಹಾಗೆ ಕೋಪಗೊಂಡಿರಲಾರನೆಂದು ಇನ್ನೊಮ್ಮೆ ತೋರುತ್ತಿತ್ತು; ಆಗ, ಮೆಟ್ಟಲು ಹತ್ತಿ ಮೇಲಕ್ಕೆ ಹೋಗಲೇ ಎನ್ನಿಸುತ್ತಿತ್ತು. ಹೀಗೆ, ಹೋಗಲೋ ಬೇಡವೋ ಎಂದು ಅವಳು ತೂಗು ಮನಸ್ಸಿನಿಂದ ಕೂಡಿರಲು, "ಜಯಲಕ್ಷ್ಮೀ" ಎಂಬ ದನಿ ಬಂದಿತು ಮೇಲಿನಿಂದ. ಇದನ್ನು ಕೇಳಿ, ಕುಂಟನಿಗೆ ಕಾಲುಬಂದಂತಾಯಿತು ಅವಳಿಗೆ.

ಪತಿಯ ಬಳಿಗೆ ಹೋಗಬೇಕೆಂದಿದ್ದ ಅವಳ ಆಸೆಗೆ ಆಸರೆಯೇನೋ ದೊರೆಯಿತು; ಆದರೆ, ಈಗ ಅವಳಲ್ಲಿ ಒಂದು ಲಜ್ಜೆ, ಒಂದು ಬಿಗುಮಾನ–ಇವು ತಲೆಹಾಕಿದುವು. ಆದರೆ, ಮತ್ತೊಮ್ಮೆ, "ಜಯಲಕ್ಷ್ಮೀ, ಬಾ ಇಲ್ಲಿ" ಎಂದು ನಾರಾಯಣಮೂರ್ತಿ ಕರೆದಾಗ, ಲಜ್ಜೆ ಲಯವಾಗಿ, ಬಿಗುಮಾನ ಬಯಲಾಗಿ, ಅವಳು ಸುಮ್ಮನೆ ಮೇಲಕ್ಕೆ ಹತ್ತಿ ಹೋಗಿ, ತಲೆಬಾಗಿ ಪತಿದೇವನ ಮುಂದೆ ನಿಂತಳು.

"ಬಾ, ಭಾಗ್ಯಲಕ್ಷ್ಮಿ, ಕುಳಿತುಕೊ" ಎಂದ ನಾರಾಯಣಮೂರ್ತಿ.

"ನನ್ನನ್ನು ಇಷ್ಟು ದಿವಸ ಮರೆತಿದ್ದವರಿಗೆ ನನ್ನ ಹೆಸರು ಹೇಗೆ ನೆನಪಿರುತ್ತೆ? ನನ್ನ ಹೆಸರು ಭಾಗ್ಯಲಕ್ಷ್ಮಿಯಲ್ಲ, ಜಯಲಕ್ಷ್ಮಿ."

"ನನಗೂ ಗೊತ್ತಿದೆ, ಜಯಲಕ್ಷ್ಮಿ. ಆದರೆ, ನೀನು ನನ್ನ ಭಾಗ್ಯಲಕ್ಷ್ಮಿ. ಇದುವರೆಗೂ . . . ಬಹಳ ಕಷ್ಟಪಡಿಸಿದ್ದೇನೆ . . . ಕೋಪಿಸಿಕೊಳ್ಳಬೇಡ . . ." ಎಂದು ಅವಳ ಭುಜದ ಮೇಲೆ ಕೈಯಿಟ್ಟ.

"ಮೊದಲೇ ಸುಖಪಟ್ಟರೆ ಆಮೇಲೆ ಕಷ್ಟ ಬರುತ್ತೆ; ಮೊದಲೇ ಸ್ವಲ್ಪ ಕಷ್ಟಪಟ್ಟರೆ, ಆಮೇಲೆ ಸುಖವೇ ಉಳಿದಿರುವುದು. ಕಷ್ಟಪಟ್ಟ ಮೇಲೆ ಅನುಭವಿಸುವ ಸುಖದ ಬೆಲೆ ಹೆಚ್ಚು."

"ಎಷ್ಟು ಬುದ್ಧಿವಂತಳಂತೆ ಮಾತಾಡುತ್ತಿ! ಇಷ್ಟು ಯಾರೇ ನಿನಗೆ ಕಲಿಸಿದವರು, ಹಳ್ಳಿಯ ಹುಡುಗಿಗೆ!"

"ಕಷ್ಟ ಅನುಭವಿಸಿದ್ದರ ಫಲ, ನಿಮ್ಮ ಪಾಠ" ಎಂದು ಮುಗುಳುನಗೆ ನಕ್ಕಳು ಜಯಲಕ್ಷ್ಮಿ.

"ಹೋಗಲಿ, ಯಾಕೆ ಮೇಲಕ್ಕೆ ಬಂದದ್ದು?"

"ನಿಮ್ಮನ್ನು ಬೇಡಿಕೊಳ್ಳುವುದಕ್ಕೆ–ನನ್ನನ್ನು ನಿಮ್ಮ ಪತ್ನಿಯಾಗಿ ಅಲ್ಲದೆ ಹೋದರೆ ಪಾದಸೇವಕಿಯಾಗಿ ಸ್ವೀಕರಿಸಿ ಎಂದು."

"ನೀನು ಬೇಡಿಕೊಳ್ಳಲೂ ಇಲ್ಲ, ನಾನು ಆಗಲಿ ಎಂದು ಅಪ್ಪಣೆ ಕೊಡಲೂ ಇಲ್ಲ. ಅಂತೂ ನಿನ್ನೆ ರಾತ್ರಿ ಬಹಳ ಹೊತ್ತು ನನ್ನ ಪಾದ ಸೇವೆ ಮಾಡಿರಬೇಕು, ಅಲ್ಲವೇ ಭಾಗ್ಯಲಕ್ಷ್ಮಿ" ಎಂದು ನಾರಾಯಣಮೂರ್ತಿ ನಸುನಗೆ ನಕ್ಕ.

"ನನ್ನ ಹೆಸರು ಭಾಗ್ಯಲಕ್ಷ್ಮಿ ಅಲ್ಲ ಅಂದರೆ ಅದೇ ಮತ್ತೆ" ಎಂದು ಹುಸಿ ಕೋಪ ನಟಿಸಿದಳು ಜಯಲಕ್ಷ್ಮಿ.

"ಅಬ್ಬ, ಸ್ವಲ್ಪ ಸಲಿಗೆ ಕೊಟ್ಟರೆ ಸಾಕು ಹೆಂಗಸರಿಗೆ, ಕಲಿತ ಮಾತನ್ನೆಲ್ಲ ಆಡಿಬಿಡುತ್ತಾರೆ. ನಿನಗೆ ಇಷ್ಟು ಮಾತು ಬರುತ್ತದೆಯೇ ಎಂದುಕೊಂಡಿದ್ದೆ."

"ನನ್ನ ಬಾಯಿಗೆ ಬೀಗ ಹಾಕಿದ್ದವರೂ ನೀವೆ, ತೆಗೆದವರೂ ನೀವೆ."

"ನಾಳೆ ನಿಮ್ಮ ತಂದೆಗೆ ಕಾಗದ ಹಾಕುತ್ತೇನೆ, ಜಯ."

"ಏನಂತ?"

"ನಿಮ್ಮ ಮಗಳನ್ನು ಕರೆದುಕೊಂಡು ಹೋಗಿ ಅಂತ."

"ಯಾಕೆ?"

"ಮತ್ತೆ ಕರೆದುಕೊಂಡು ಬರುವುದಕ್ಕಾಗಿ."

ಜಯಲಕ್ಷ್ಮಿಗೆ ನಗುವನ್ನು ತಡೆಯಲಾಗಲಿಲ್ಲ; ಗೊಳ್ಳನೆ ನಕ್ಕಳು. ನಾರಾಯಣಮೂರ್ತಿ ಅವಳ ಕೈಹಿಡಿದುಕೊಂಡ.

"ಇನ್ನು ಹೋಗುತ್ತೇನೆ, ಬಿಡಿ" ಎಂದಳು ಜಯಲಕ್ಷ್ಮಿ. ತುಸ ಹೊತ್ತು ಇಬ್ಬರೂ ಮಾತಾಡಲಿಲ್ಲ, ಮೌನವಾಗಿದ್ದರು; ಮಾತಿನಿಂದ ವ್ಯಕ್ತಪಡಿಸಲು ಸಾಧ್ಯವಿಲ್ಲದ ಒಲವನ್ನು ಮೌನದಿಂದಲೇ ವ್ಯಕ್ತಪಡಿಸುತ್ತಿದ್ದರು.

ಕೊನೆಗೆ ಜಯಲಕ್ಷ್ಮಿ ಕೆಳಕ್ಕೆ ಇಳಿದು ಬಂದು ಮಲಗಿಕೊಂಡಳು: ನಾರಾಯಣಮೂರ್ತಿ ದೀಪ ಆರಿಸಿ ಮಲಗಿಕೊಂಡ.

## ೨೧

### ಜಯಲಕ್ಷ್ಮಿ ಭಾಗ್ಯಲಕ್ಷ್ಮಿಯಾಗಿ ಮನೆಗೆ ಬಂದಳು

ನಾರಾಯಣಮೂರ್ತಿ ತಾನು ಉದ್ದೇಶಿಸಿದಂತೆ ನಾಗಪ್ಪನವರಿಗೆ ಕಾಗದ ಬರೆದ. ನಾಗಪ್ಪನವರು ಬಂದು ಮಗಳನ್ನು ಕರೆದುಕೊಂಡು ಹೋದರು. ಕೆಲ ದಿನಗಳಾದಮೇಲೆ, ಒಳ್ಳೆಯ ಲಗ್ನ ನೋಡಿ ಶುಭಪ್ರಸ್ತಕ್ಕೆ ಏರ್ಪಾಡು ಮಾಡಿದರು.

ಪ್ರಸ್ತಕ್ಕೆ ವೆಂಕಮ್ಮನವರೂ ಗೌರಿಯೂ ಹೋಗಿದ್ದರು. ಪ್ರಸ್ತವಾದ ಮೇಲೆ ಹಿಂದಿರುಗಿ ಬರುವಾಗ ನಾರಾಯಣಮೂರ್ತಿ ಹೆಂಡತಿಯನ್ನೂ ಜೊತೆಯಲ್ಲೇ ಕರೆದುಕೊಂಡು ಬಂದ.

ನಾಗಪ್ಪನವರು ತಮ್ಮ ಸ್ವಯಾರ್ಜಿತ ಆಸ್ತಿಯಾದ ಮನೆ, ಎರಡು ಮೂರು ತೋಟ ಮತ್ತು ಇಪ್ಪತ್ತು ಎಕರೆ ಗದ್ದೆ, ತಾವು ಗಳಿಸಿಟ್ಟಿದ್ದ ಹತ್ತು ಹದಿನೈದು ಸಾವಿರ ರೂಪಾಯಿ, ಎರಡು ಮೂರು ಸೇರಿನಷ್ಟು ಭಂಗಾರ– ಇವಿಷ್ಟನ್ನೂ ಜಯಲಕ್ಷ್ಮಿಗೂ ನಾರಾಯಣಮೂರ್ತಿಗೂ ಕೊಟ್ಟುಬಿಟ್ಟರು. ಜಯಲಕ್ಷ್ಮಿ ನಿಜವಾಗಿಯೂ ನಾರಾಯಣಮೂರ್ತಿಯ ಭಾಗ್ಯಲಕ್ಷ್ಮಿಯಾಗಿ ಬಂದಳು. ಇಷ್ಟರಿಂದಲೇ ನಾರಾಯಣಮೂರ್ತಿ ಸುಖವಾಗಿ ಜೀವಿಸಬಹುದಾಗಿತ್ತು. ಮಾವನಿಂದ ಬಂದ ಆಸ್ತಿಯೆಲ್ಲವನ್ನೂ ತನ್ನ ಹೆಂಡತಿಯ ಹೆಸರಿನಲ್ಲೇ ಇಟ್ಟುಬಿಟ್ಟು, ತನ್ನ ಉದ್ಯೋಗವನ್ನು ಬಿಡದೆ, ಅದರ ಸಂಬಳದಿಂದಲೇ ಸರಳವಾದ ಜೀವನ ನಡಸುತ್ತಿದ್ದನು.

೨೨

## ಕಪ್ಪು ಮೋಡದಲ್ಲಿ ಹುಟ್ಟುವ ಮಿಂಚಿನಂತೆ

ಜಯಲಕ್ಷ್ಮಿ ತುಂಬು ಬಸಿರಿ. ಬಾಣಂತನಕ್ಕೆ ತೌರುಮನೆಗೆ ಹೋಗಿದ್ದಳು. ಅವಳಿಗೆ ಚೊಚ್ಚಲು ಮಗು ಗಂಡಾಗಬೇಕೆಂದು ವೆಂಕಮ್ಮನವರ ಹೆಬ್ಬಯಕೆ. ಗೌರಿಗೇನೋ ಯಾವುದಾದರೂ ಸಂತೋಷವೆ. ಹೆಣ್ಣಾದರೆ ಎಲ್ಲಿ ಜಯಲಕ್ಷ್ಮಿಯ ಹಾಗೇ ಕಪ್ಪಾಗಿ ಹುಟ್ಟಿಬಿಡುತ್ತದೆಯೊ ! ಆದ್ದರಿಂದ, ಗಂಡಾದರೇ ಮೇಲು, ಕಪ್ಪಾಗಿದ್ದರೂ ಪರವಾಯಿಲ್ಲ– ಎಂದು ವೆಂಕಮ್ಮನವರ ಎಣಿಕೆ. ಹೆಣ್ಣು ಕಪ್ಪು ಎಂದು ಬೀಸಾಡುವುದಕ್ಕೆ ಆಗುತ್ತದೆಯೆ? ಕಪ್ಪು ಜಯಲಕ್ಷ್ಮಿಯನ್ನು ಮದುವೆಮಾಡಿಕೊಂಡು ನಾರಾಯಣಮೂರ್ತಿ ಸುಖವಾಗಿ ಸಂತೋಷವಾಗಿ ಇಲ್ಲವೆ? ಕಪ್ಪೊ ಬಿಳುಪೊ– ಹೆಣ್ಣು ಅಂತ ಹುಟ್ಟಿದಮೇಲೆ ಅದರ ಕೈಹಿಡಿಯುವ ಗಂಡೊಂದು ಹುಟ್ಟಿಯೇ ಇರುತ್ತೆ, ಜನ ಏಕೆ ಹೀಗೆ ಹೆಣ್ಣು ಹೆಣ್ಣು ಎಂದು ಬೀಳುಗಳೆಯುತ್ತಾರೊ, ಸ್ವಲ್ಪವಾದರೂ ಬುದ್ಧಿಯಿಲ್ಲ– ಎಂದು ಗೌರಿಯ ವಾದ.

ಒಂದು ದಿನ, ಶನಿವಾರ, ಗೌರಿ ತುಂಟನಿಗೆ ಬೀರುತ್ತ ತಮ್ಮನನ್ನು ಕೇಳಿದಳು:

"ನಾಣು, ಗಂಡಾದರೆ ಏನು ಹೆಸರಿಡುತ್ತಿ?"

"ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿ ಹೊಲಿಸಿದರು ಅಂದ ಹಾಗೆ, ಈಗ ಯಾಕೆ ಅದರ ಯೋಚನೆ? ಹುಟ್ಟಿದಮೇಲೆ ಹೆಸರಿಡದೆ ಇರುತ್ತೇವೆಯೇ ?"

"ಹಾಗಲ್ಲ, ನಾಣು. ಈಗಲೆ ನಿಶ್ಚಯ ಮಾಡಿಟ್ಟುಕೊಂಡಿದ್ದರೆ, ಮನಸ್ಸಿನ ಆತಂಕ ಕಳೆಯುತ್ತೆ, ಅಷ್ಟೆ."

"ನೀನೇ ಹೇಳು, ನಿನ್ನ ಮನಸ್ಸಿನಲ್ಲೇನಿದೆ ?"

"ಅಪ್ಪನ ಹೆಸರಿಡೋಣ ಅಂತ."

"ಅಗತ್ಯವಾಗಿ ಆಗಬಹುದು. ನನಗೆ ಒಪ್ಪಿಗೆ."

"ಹೋಗಲಿ, ಹೆಣ್ಣುಮಗುವಾದರೊ ?"

"ನನಗೂ ಅದೇ ಭಯ. ಎಲ್ಲಿ ಹೆಣ್ಣು . . ."

"ನಾಣು, ಏನೋ ಇದು, ನೀನೂ ಎಲ್ಲರ ಹಾಗೇ ಆಡುತ್ತಿ. ಹೆಣ್ಣು ಅಂದರೆ ಅಷ್ಟು ನಿಕೃಷ್ಟವೇ ?"

"ಹೆಣ್ಣು ಹುಟ್ಟುತ್ತೆ ಅನ್ನುವ ಭಯವಲ್ಲ. ಹುಟ್ಟಿದರೆ ಎಲ್ಲಿ ಅವಳನ್ನೆ ಹೋತುಕೊಂಡು ಕರೀಕಲ್ಲು ಬೊಂಬೆಯ ಹಾಗೆ ಹುಟ್ಟುತ್ತೆಯೋ ಅಂತ ಭಯ, ಅಷ್ಟೆ" ಎಂದು ನಾರಾಯಣಮೂರ್ತಿ ನಕ್ಕ.

"ಕಪ್ಪಾಗಿ ಹುಟ್ಟಿದರೆ ತಾನೆ ಏನು ನಷ್ಟ? ಜಯಲಕ್ಷ್ಮಿ ಈಗ ಸುಖವಾಗಿಲ್ಲವೆ ?"

"ಎಲ್ಲರೂ ನನ್ನ ಹಾಗೇ ಇರುತ್ತಾರೆಯೆ ಗೌರಿ? ಅಲ್ಲದೆ, ನನ್ನ ಮಾವನವರ ಹಾಗೆ 'ಮೋಸ'ಮಾಡಿ ಹೆಣ್ಣುಕೊಡುವ ವಿದ್ಯೆ ಮಾತ್ರ ನನಗೆ ಬರದು! ಹಗಲಿನಲ್ಲೇ ಹೆಣ್ಣು ತೋರಿಸುತ್ತೇನೆ. ಇಷ್ಟಪಟ್ಟರೆ ಮಾಡಿಕೊಳ್ಳಲಿ, ಇಲ್ಲದಿದ್ದರೆ ಬಿಡಲಿ. ಗಂಡುಮಗ ಅಂತ ತಿಳಿದು ಕೊಂಡು ಸಾಕುತ್ತೇನೆ."

"ಸರಿ, ಬಿಡು ಮತ್ತೆ, ಇನ್ನು ಭಯ ಏಕೆ? ಪಾಪ, ಜಯಲಕ್ಷ್ಮಿಯೂ ನಿನ್ನ ಹಾಗೇ ಭಯಪಟ್ಟುಕೊಂಡಿದಾಳೆ. ತನ್ನ ಹಾಗೇ ತನ್ನ ಮಗಳೂ ಎಲ್ಲಿ ಕಷ್ಟಪಡಬೇಕಾಗುತ್ತದೆಯೋ ಅಂತ ಅವಳ ಭಯ."

"ಅವಳು ಏನು ಕಷ್ಟಪಟ್ಟಿದ್ದೊ, ಕಾಣೆ!"

"ಬಹಳ ಕಷ್ಟಪಡಲಿಲ್ಲ ಅಂತನ್ನು. ಎಲ್ಲೋ ಸ್ವಲ್ಪ ಕಾಲ ; ಅವಳ ಭಾಗಕ್ಕೆ ಅದೇ ಒಂದು ಯುಗವಾಗಿತ್ತು, ಅಷ್ಟೆ. ಹೋಗಲಿ ಬಿಡು, ಈಗ ಆ ಮಾತೇಕೆ. ಹೆಣ್ಣಾದರೆ ಹೆಸರೇನಿಡುತ್ತಿ ಹೇಳು."

"ನೀನೇ ಹೇಳು."

"ಇಲ್ಲ, ನೀನು ಹೇಳಬೇಕು. ಗಂಡಿನ ಹೆಸರು ನಾನು ಹೇಳಿದೇನೆ. ಹೆಣ್ಣಿನ ಹೆಸರು ನೀನೇ ಹೇಳಬೇಕು."

"ನನ್ನ ಮನಸ್ಸಿನಲ್ಲಿ ಭಾಗ್ಯಲಕ್ಷ್ಮಿ ಅಂತ ಇಡೋಣ ಅಂತ."

"ಅಂತೂ ಒಂದು ಲಕ್ಷ್ಮಿ ಆಗಬೇಕು. ಅಮ್ಮನ ಹೆಸರು ಇಟ್ಟಿದ್ದರೂ ಲಕ್ಷ್ಮಿಯೇ – ವೆಂಕಟಲಕ್ಷ್ಮಿ. ವೆಂಕಟಲಕ್ಷ್ಮಿ ಏಕೋ ಚೆನ್ನಾಗಿಲ್ಲ. ಅಮ್ಮನಿಗೆ ಸ್ವಲ್ಪ ಕೋಪ ಬರುತ್ತೇನೊ. ಬಂದರೆ ಬಂದುಕೊಳ್ಳಲಿ.

ಜಯಲಕ್ಷ್ಮಿ ತಂದಿರುವ ಭಾಗ್ಯವಷ್ಟೇ ಸಾಲದು, ಇನ್ನಷ್ಟು ಬೆಳೆಯಲಿ ಅಂತಲೋ ನಿನ್ನ ದುರಾಸೆ!" ಎಂದು ಹಾಸ್ಯವಾಗಿ ಕೆಣಕಿದಳು ಗೌರಿ.

"ಬೆಳೆಯುವ ಹಾಗಿದ್ದರೆ ಬೆಳೆಯಲಿ. ಈ ಲಕ್ಷ್ಮಿ ಬಡವನ ಮನೆಗೆ ತಂದ ಭಾಗ್ಯವನ್ನು ಆ ಲಕ್ಷ್ಮಿ ಇನ್ನೊಬ್ಬ ಬಡವನ ಮನೆಗೆ ತೆಗೆದು ಕೊಂಡು ಹೋದರೂ ಸಂತೋಷವೇ."

"ಮತ್ತೆ ಭಿಕ್ಷಕ್ಕೆ ಹೋಗಬೇಕಾಗುತ್ತೆ ಅಷ್ಟೆ. ಗಂಡುಮಕ್ಕಳಾದರೆ ಏನು ಮಾಡುತ್ತಿ, ಅವರಿಗೆ ಏನೂ ಇಡಬೇಡವೆ?"

"ಮೊದಲು ಹೆಣ್ಣಾಗಲಿ, ಆಮೇಲೆ ಗಂಡು."

"ಓಹೋ, ಅಂತೂ ರಾಯರಿಗೆ ಮೊದಲು ಹೆಣ್ಣೇ ಆಗಬೇಕೋ? ನಿನ್ನ ಪ್ರಾರ್ಥನೆಯನ್ನು ದೇವರು ಸಲ್ಲಿಸಿದ್ದಾನೆ" ಎಂದು ಗೌರಿ ಮಡಿಲಿ ನಲ್ಲಿ ಇಟ್ಟುಕೊಂಡಿದ್ದ ಕಾಗದವನ್ನು ತೆಗೆದು ನಾರಾಯಣಮೂರ್ತಿಯ ಕೈಗೆ ಹಾಕಿದಳು.

ನಾರಾಯಣಮೂರ್ತಿ ತವಕದಿಂದ ಮಾವನವರು ಬರೆದಿದ್ದ ಕಾಗದ ಓದಿಕೊಂಡ. ಶುಕ್ರವಾರ ಬೆಳಗ್ಗೆ ಜಯಲಕ್ಷ್ಮಿ ಹೆಣ್ಣುಮಗುವನ್ನು ಹಡೆದಿದ್ದಳೆಂದೂ, ಮಗು ಬಾಣಂತಿ ಸುಖವಾಗಿದ್ದಾರೆಂದೂ, ನಾರಾಯಣ ಮೂರ್ತಿ ತಾಯಿತಂಗಿಯರೊಡಗೂಡಿ ನಾಮಕರಣಕ್ಕೆ ಬರಬೇಕೆಂದೂ ಕಾಗದ ಬರೆದಿತ್ತು.

ಶುಭ ಸಮಾಚಾರ ಕೇಳಿ, ವೆಂಕಮ್ಮನವರು ಮೊಮ್ಮಗನನ್ನು ಕಾಣ ಬೇಕೆಂದಿದ್ದ ಹೆಬ್ಬಯಕೆ ಸಹ ಮರೆತು ಹಿಗ್ಗಿದರು!

ನಾಮಕರಣವೂ ಆಯಿತು. ಮಗುವಿಗೆ ಭಾಗ್ಯಲಕ್ಷ್ಮಿಯೆಂದೇ ಹೆಸರಿಡಲಾಯಿತು. ಆದರೆ, ಭಾಗ್ಯಲಕ್ಷ್ಮಿ ಕಪ್ಪಾಗಿರಲಿಲ್ಲ! ಇದರಿಂದ ಜಯಲಕ್ಷ್ಮಿಗೆ ಆಶ್ಚರ್ಯಮಿಶ್ರವಾದ ಸಂತೋಷವುಂಟಾಗಿತ್ತು.

"ಕಪ್ಪುಮೋಡದಲ್ಲಿ ಹುಟ್ಟುವ ಮಿಂಚಿನಂತೆ, ನಿನ್ನ ಮಗು" ಎಂದು ನಾರಾಯಣಮೂರ್ತಿ ಬಾರಿಬಾರಿಗೆ ಹಾಸ್ಯಮಾಡುತ್ತಿದ್ದ.

೨೩

## ಮಾವನವರೊಡನೆ ಮಾತುಕತೆ

ಮಗುವಿಗೆ ಆರು ತಿಂಗಳು ತುಂಬಿದ ಮೇಲೆ ಏಳನೆಯ ತಿಂಗಳಲ್ಲಿ ಒಳ್ಳೆಯ ದಿನ ನಾಗಪ್ಪನವರೂ ಅವರ ಹೆಂಡತಿಯೂ ಸೊಸೆಯನ್ನೂ ಮೊಮ್ಮಗುವನ್ನೂ ಅಳಿಯನ ಮನೆಗೆ ಕರೆದುಕೊಂಡು ಬಂದರು.

ಇಷ್ಟುಹೊತ್ತಿಗೆ ನಾರಾಯಣಮೂರ್ತಿ ಶ್ರೀರಾಮಪೇಟೆಯಲ್ಲಿ ದೊಡ್ಡ ಉಪ್ಪರಿಗೆ ಮನೆ ಕಟ್ಟಿಸಿದ್ದ. ಉಪ್ಪರಿಗೆ ಮನೆ ಕಟ್ಟಿಸಿದ ಮೇಲೆ ಸುತ್ತ ಮುತ್ತಿನ ಜನ ನಾರಾಯಣಮೂರ್ತಿ ಗಣ್ಯಮನುಷ್ಯನೆಂದು ತಿಳಿಯ ತೊಡಗಿದರು. ಹೆಂಡತಿ ಮಗು ಬಂದ ಮೇಲೆ ಹೊಸಮನೆಗೆ ಹೋಗುವು ದೆಂದು ನಾರಾಯಣಮೂರ್ತಿ ನಿಷ್ಕರ್ಷೆ ಮಾಡಿದ್ದ.

ಮಗುವನ್ನು ಕರೆದುಕೊಂಡು ಬಂದು ಎರಡು ಮೂರು ದಿನಗಳಾ ಗಿದ್ದುವು. ಅಂದು ಭಾನುವಾರ. ಊಟವಾದ ಬಳಿಕ ಚಾಪೆಯ ಮೇಲೆ ಮಾವನೂ ಅಳಿಯನೂ ಎಲೆಯಡಕೆ ಅಗಿಯುತ್ತ ಮಾತಾಡುತ್ತ ಕುಳಿತಿ ದ್ದರು; ದೂರದಲ್ಲಿ ಭಾಗ್ಯಲಕ್ಷ್ಮಿ ಕೈಕಾಲಾಡಿಸುತ್ತ, ತನಗೆ ತಾನೇ ಆಡಿಕೊಳ್ಳುತ್ತ ಮಲಗಿತ್ತು. ನಾಗಪ್ಪನವರು ತಾವು ಹೊರಡುವ ಪ್ರಸ್ತಾವ ತೆಗೆದರು.

"ಮಾವಯ್ಯ, ತಾವು ಇಷ್ಟು ಬೇಗ ಹೊರಡುವುದೆಂದರೇನು. ತಾವು ಇನ್ನೂ ಸ್ವಲ್ಪ ದಿನ ಇಲ್ಲೇ ಇರಬೇಕು" ಎಂದ ನಾಣು.

"ಇಲ್ಲ, ನಾರಾಯಣಮೂರ್ತಿ. ಬೆಳೆ ಎಲ್ಲ ಕುಯ್ಲಿಗೆ ಬಂದಿದೆ. ಎದುರಿಗೆ ನಿಂತು ಕೆಲಸ ಮಾಡಿಸದೆ ಹೋದರೆ ಕದ್ದುಬಿಡುತ್ತಾರೆ. ಅಲ್ಲದೆ ಮನೆ ನೋಡಿಕೊಳ್ಳುವವರು ಯಾರೂ ಇಲ್ಲ; ಒಬ್ಬ ರೈತನ ವಶಕ್ಕೆ ಒಪ್ಪಿಸಿ ಬಂದಿದ್ದೇನೆ. ಸೂರಪ್ಪ ನನ್ನಿಂದ ದೂರವಾಗಿ ಬಿಟ್ಟಿದ್ದಾನೆ. ನಾನು ಇನ್ನೂ ದತ್ತು ತೆಗೆದುಕೊಂಡಿಲ್ಲವೆಂದು ಅವನಿಗೆ ಮನಸ್ತಾಪ. ನಾನೂ ಮನಸ್ಸು ಬದಲಾಯಿಸಿದ್ದೇನೆ ಅನ್ನು. ಇವೊತ್ತು ನಿನ್ನ ಕೂಡ ಬಾಯಿಬಿಟ್ಟು ಹೇಳುತ್ತೇನೆ. ನಿನ್ನಲ್ಲಿ ಮುಚ್ಚುಮರೆ ಯೇನು? ದತ್ತು ತೆಗೆದುಕೊಳ್ಳುವುದಿಲ್ಲವೆಂತ ಮಾಡಿದ್ದೇನೆ. ನನ್ನ ಉಳಿದ

ಆಸ್ತಿಯನ್ನೂ ಜಯಲಕ್ಷ್ಮಿಯ ಹೆಸರಿಗೇ ಬರೆದುಬಿಡಬೇಕೆಂದು ನಿಶ್ಚಯ ಮಾಡಿಕೊಂಡಿದ್ದೇನೆ. ನಿನ್ನ ಹೆಸರಿಗೇ ಬೇಕಾದರೂ ಬರೆದು ಬಿಡುತ್ತೇನೆ. ನನಗೆ ನೀನು ಬೇರೆ ಅಲ್ಲ, ಜಯಲಕ್ಷ್ಮಿ ಬೇರೆ ಅಲ್ಲ. ಊರಿನಲ್ಲಿರುವ ಮನೆಯನ್ನು ಮಾರಿಬಿಟ್ಟು ಇಲ್ಲೇ ಒಂದು ಮನೆ ತೆಗೆಯ ಬೇಕೆಂದು ಮಾಡಿಕೊಂಡಿದ್ದೇನೆ. ಅವಳೂ ಎಲ್ಲಕ್ಕೂ ಒಪ್ಪಿದ್ದಾಳೆ. ನಿನ್ನ ಅಭಿಪ್ರಾಯವೇನು ?"

"ಮಾವಯ್ಯ, ನನ್ನ ಅಭಿಪ್ರಾಯ ಇರಲಿ. ನಾನು ನಿಮ್ಮೊಡನೆ ಸರಿಯಾಗಿ ಮಾತಾಡುತ್ತಿರುವುದು ಇದೇ ಮೊದಲು. ಮದುವೆಯ ಸಂದರ್ಭದಲ್ಲೂ ಆ ಮೇಲೂ ನಿಮ್ಮ ವಿಷಯದಲ್ಲಿ ಬಹು ಕ್ರೂರವಾಗಿ ನಡೆದುಕೊಂಡಿದ್ದೇನೆ. ಅದನ್ನೆಲ್ಲ ತಾವು ಮರೆತುಬಿಡಬೇಕೆಂದು ಕೇಳಿ ಕೊಳ್ಳುತ್ತೇನೆ."

"ನಾರಾಯಣಮೂರ್ತಿ, ಇದೇನು ಹೀಗೆ ಮಾತಾಡುತ್ತೀಯೆ ! ಅಪರಾಧಿ ನಾನೇ ಹೊರತು ನೀನಲ್ಲ. ನನಗೂ ವರಗಳನ್ನು ನೋಡಿ ನೋಡಿ ಸಾಕಾಗಿ ಹೋಗಿತ್ತು. ನೋಡಿದವರೆಲ್ಲ ಹೆಣ್ಣು ಕಪ್ಪು ಎಂದು ಹಿಂದಿರುಗುತ್ತಿದ್ದರು. ವರದಕ್ಷಿಣೆಯ ಆಸೆಗೆ ಸಹ ಯಾರೂ ಒಪ್ಪಿಕೊಳ್ಳು ತ್ತಿರಲಿಲ್ಲ. 'ಅಯ್ಯೋ ದೇವರೆ, ನಾನು ಮಾಡಿದ ಅಂಥ ಪಾಪವೇನು, ಎಲ್ಲರಿಗೂ ಹುಡುಗಿಯ ಕಪ್ಪು ಕಾಣುತ್ತದೆಯೇ ಹೊರತು ಅವಳ ಮುಖದ ಸಲ್ಲಕ್ಷಣವಾಗಲಿ ಗುಣಸಂಪತ್ತಾಗಲಿ ಗೋಚರವಾಗುವುದಿಲ್ಲ ವಲ್ಲಾ' ಎಂದು ತುಂಬ ವ್ಯಥೆಪಟ್ಟುಕೊಳ್ಳುತ್ತಿದ್ದೆ. ನನ್ನ ಪೇಚಾಟ ಕಂಡು ಸೂರಪ್ಪನ ಹೆಂಡತಿ ಆ ಉಪಾಯ ಹೇಳಿಕೊಟ್ಟಳು. ಉಪಾಯ ವೇನೋ ಫಲಿಸಿತು. ಆ ಮೇಲೆ ಬಹಳ ನೊಂದುಕೊಂಡೆ, ನಾರಾಯಣ ಮೂರ್ತಿ. ಒಳ್ಳೆಯ ಹುಡುಗನಿಗೆ ಮೋಸಮಾಡಿ ನನ್ನ ಮಗಳಿಗೂ ತುಂಬಾ ಕಷ್ಟತಂದೆ, ಇದಕ್ಕೆಲ್ಲಾ ನಾನೇ ಕಾರಣ ಎಂದು ಬಹಳ ವ್ಯಥೆಪಡುತ್ತಿದ್ದೆ. ನಾರಾಯಣಮೂರ್ತಿ, ನನ್ನ ಆತ್ಮಸಾಕ್ಷಿಯಾಗಿ ಹೇಳುತ್ತೇನೆ, ಮೋಸಮಾಡಬೇಕೆಂದು ಖಂಡಿತವಾಗಿಯೂ ನನಗೆ ಉದ್ದೇಶವಿರಲಿಲ್ಲ. ಅದು ಏನಾದರೂ ಇರಲಿ, ದೇವರ ದಯದಿಂದ ಈಗ ನೀವು ಗಂಡ ಹೆಂಡಂದಿರು ಅನ್ಯೋನ್ಯವಾಗಿದ್ದೀರಲ್ಲ, ಅದೇ ನನಗೆ

ಪರಮ ಸಂತೋಷ. ಅದಿರಲಿ, ಇನ್ನೊಂದು ವಿಷಯ ನಿನ್ನ ಕೈಲಿ ಈಗ ಹೇಳಬೇಕು. ಅದೇನೆಂದರೆ ಸುಬ್ಬಯ್ಯನ ವಿಷಯ: ಅವನ ವಿಚಾರ ದಲ್ಲಿ ನೀನೇನಾದರೂ ಶಂಕೆ ಇಟ್ಟುಕೊಂಡಿದ್ದರೆ ಅದನ್ನ ಬಿಟ್ಟುಬಿಡು. ಗಂಡು ಗೊತ್ತುಮಾಡಿಕೊಟ್ಟದ್ದಕ್ಕೆ ಸುಬ್ಬಯ್ಯ ನನ್ನಿಂದಲೂ ನಿನ್ನಿಂದಲೂ ಹಣ ತೆಗೆದುಕೊಂಡನೆಂದು ಸೂರಪ್ಪ ಊರಿನಲ್ಲೆಲ್ಲಾ ಸಾರಿಕೊಂಡು ಬಂದ. ಪಾಪ, ಸುಬ್ಬಯ್ಯ ಒಂದು ಕಾಸೂ ಮುಟ್ಟಿದವನಲ್ಲ. ಹುಡುಗಿಯ ರೂಪಿನ ವಿಚಾರ ಕೇಳಿದರೆ ಏನೂ ಹೇಳಬೇಡವೆಂದು ಮಾತ್ರ ಹೇಳಿದ್ದೆ, ಅಷ್ಟೆ. ನೀನು ಹುಡುಗಿಯನ್ನು ನೋಡಿದ ದಿವಸದ ಏರ್ಪಾಡಿಗೆಲ್ಲಾ ಸೂರಪ್ಪನ ಹೆಂಡತಿ ಕಾರಣಳೇ ಹೊರತು ಸುಬ್ಬಯ್ಯ ಅದರಲ್ಲಿ ಸ್ವಲ್ಪವೂ ಭಾಗಿಯಲ್ಲ. ಸುಬ್ಬಯ್ಯ ಬಹು ಸರಳ ಮನಸ್ಸಿನವನು."

"ನೀವು ಸುಬ್ಬಯ್ಯನ ಹೆಸರೆತ್ತುತ್ತಲೂ ಜ್ಞಾಪಕ ಬಂತು. ಅವರು ಇವೊತ್ತು ಬಂದರೂ ಬರಬಹುದು. ಕಾಗದ ಹಾಕಿದ್ದೆ."

"ಅದೇನೂ?" ಎಂದು ಕುತೂಹಲದಿಂದ ಕೇಳಿದರು ನಾಗಪ್ಪನವರು.

"ಅದನ್ನೇ ಹೇಳುವುದರಲ್ಲಿದ್ದೆ. ನಿಮ್ಮನ್ನ ಇನ್ನ ಸ್ವಲ್ಪ ದಿನ ಇರಬೇಕೆಂದು ಬಲವಂತ ಮಾಡುತ್ತಿರುವುದರ ಕಾರಣ ಇಷ್ಟೆ: ಮುಂದಿನ ಗುರುವಾರ ಲಗ್ನ ಪ್ರಶಸ್ತವಾಗಿದೆಯಂತೆ. ನೀವು ಇರುವಾಗಲೇ ಗೃಹ ಪ್ರವೇಶೋತ್ಸವ ಮಾಡಬೇಕೆಂದು ನನ್ನ ಆಸೆ. ಅದಕ್ಕಾಗಿಯೇ ಸುಬ್ಬಯ್ಯ ಮಾವಯ್ಯನಿಗೂ ಕಾಗದ ಬರೆದಿದ್ದೆ. ಇವೊತ್ತು ಸಂಜೆಯ ರೈಲಿಗೆ ಬರುತ್ತಾರಂತೆ. ತಾವೂ ಅತ್ತೆಯವರೂ ದೊಡ್ಡ ಮನಸ್ಸು ಮಾಡಿ ಅಲ್ಲಿಯವರೆಗೂ ಇದ್ದು ಉತ್ಸವ ಬೆಳಸಿಕೊಡಬೇಕು. ನಾನು ಹೆಚ್ಚು ಹೇಳಬೇಕಾಗಿಲ್ಲ. ಅದು ತಮ್ಮ ಮನೆಯೇ."

"ಆಗಲಿ, ನಾರಾಯಣಮೂರ್ತಿ. ಇಷ್ಟು ಹೇಳಿದ ಮೇಲೆ ನಾನು ಒಲ್ಲೆ ಎನ್ನುವುದಾದರೂ ಹೇಗೆ? ಅಂದ ಹಾಗೆ, ಸುಬ್ಬಯ್ಯ ಈಗ ಇರುವುದೆಲ್ಲಿ?"

"ಈಗ ಅವರಿಗೆ ಹಾಸನಕ್ಕೆ ವರ್ಗವಾಗಿದೆಯಂತೆ. ಪಾಪ, ಅವರ ಹೆಂಡತಿಯೂ ಹೋಗಿ ವರ್ಷದ ಹತ್ತಿರ ಹತ್ತಿರಕ್ಕೆ ಬಂತು. ಮಕ್ಕಳೂ

ಇಲ್ಲ. ಇಲ್ಲೇ ಬಂದು ಇದ್ದುಬಿಡಿ ಎಂದು ಬರೆದಾಯಿತು, ಇಲ್ಲಿ ಬಂದಾಗಲೆಲ್ಲಾ ಹೇಳಾಯಿತು. 'ಗಟ್ಟಿಯಾಗಿ ಇರುವತನಕ ದುಡಿಯೋಣ, ಕೆಲಸ ಏಕೆ ಬಿಟ್ಟುಬಿಡಲಿ? ನಾನು ಮುದುಕನಾದಾಗ ನೀನೇ ನನಗೆ ದಿಕ್ಕು, ಗೊತ್ತೇ ಇದೆ' ಎನ್ನುತ್ತಾರೆ.

"ಅಯ್ಯೋ ಪಾಪ, ಅವರ ಹೆಂಡತಿ ಹೋದದ್ದು ಗೊತ್ತೇ ಇಲ್ಲ. ಆತ ಒಳ್ಳೇ ಪ್ರಾಣಿ. ಇರಲಿ, ರಾತ್ರಿ ಬಂದಾಗ ಅವರಿಗೆ ಹೇಳುತ್ತೇನೆ. ಅದಿರಲಿ, ಮನೆ ವಿಷಯದಲ್ಲಿ ನಿನ್ನ ಅಭಿಪ್ರಾಯ ಏನು? ಕಟ್ಟಿದ ಮನೆ ಕೊಂಡುಕೊಳ್ಳುವುದು ಒಳ್ಳೆಯದೊ, ಕಟ್ಟಿಸುವುದು ಒಳ್ಳೆಯದೊ?"

"ತಾವು ಅನ್ಯಥಾ ಭಾವಿಸದೆ ಹೋದರೆ ನನ್ನದೊಂದು ಅರಿಕೆ ಇದೆ. ತಾವು ಮನೆ ಕೊಳ್ಳಬೇಕಾಗಿಯೂ ಇಲ್ಲ, ಕಟ್ಟಿಸಬೇಕಾಗಿಯೂ ಇಲ್ಲ. ಈಗ ಕಟ್ಟಿರುವ ಮನೆ ತಮ್ಮದೇ ಆಗಿದೆ. ತಾವು ಇಲ್ಲಿಯೇ ಬಂದು ಇದ್ದರೆ ನಮಗೆಲ್ಲಾ ಸಂತೋಷ. ನಮ್ಮ ತಾಯಿಯವರ ಅಭಿಪ್ರಾಯವೂ ಅದೇಯೆ."

"ಅದೆಲ್ಲಾ ಸರಿಯೆ, ನಾರಾಯಣಮೂರ್ತಿ. ನೋಡಿದವರು ಆಡಿಕೊಂಡಾರು; ಸೂರಪ್ಪ ಇಲ್ಲದ ಸಲ್ಲದ ಕತೆ ಹಬ್ಬಿಸುವುದಕ್ಕೂ ಹಿಂದೆಗೆಯುವುದಿಲ್ಲ. ಅದನ್ನೆಲ್ಲಾ ನನ್ನ ಹೆಂಡತಿ ಸಹಿಸಲಾರಳು. ಆದ್ದರಿಂದ ಇಲ್ಲಿಯೇ ಹತ್ತಿರದಲ್ಲೆ ಎಲ್ಲಾದರೂ ಬೇರೆಯ ಮನೆ ನೋಡು. ಇಲ್ಲದಿದ್ದರೆ ನನಗಾಗಿ ಒಂದನ್ನ ಕಟ್ಟಿಸಿಕೊಡು. ಆ ಮನೆಯೂ ಎಂತಿದ್ದರೂ ನಿನ್ನದೇ. ನಿನ್ನ ಮನೆಯಲ್ಲೇ ಇದ್ದ ಹಾಗಾಗುತ್ತೆ."

ಇದಕ್ಕೆ ನಾರಾಯಣಮೂರ್ತಿ ಏನೂ ಉತ್ತರ ಹೇಳಲಿಲ್ಲ. ಹೆಚ್ಚು ಮಾತಾಡಿದರೆ ಉಪಚಾರದ ಮಾತು ಎಂದು ಭಾವಿಸುತ್ತಾರೋ ಏನೋ, ಅವರು ಹೇಳಿದ್ದಕ್ಕೆ ಒಪ್ಪಿಕೊಂಡರೆ ಅಳಿಯನಿಗೆ ಇಷ್ಟು ಕೊಟ್ಟಿದ್ದರೂ ತೃಪ್ತಿಯಿಲ್ಲ, ಇನ್ನೂ ದುರಾಸೆ ಎಂದುಕೊಳ್ಳುವರೋ ಏನೋ ಎಂದು ಅವನಿಗೆ ಅನ್ನಿಸಿತು. ಆದ್ದರಿಂದ ಏನು ಉತ್ತರ ಹೇಳುವುದಕ್ಕೂ ತೋಚದೆ ಅವನು ಮೌನವಾಗಿದ್ದ. ಅಷ್ಟು ಹೊತ್ತಿಗೆ ಸರಿಯಾಗಿ ಮಗು ಅಳತೊಡಗಿತು. ನಾಗಪ್ಪನವರು ಮಗುವನ್ನು ಎತ್ತಿಕೊಳ್ಳುವಂತೆ

ಜಯಲಕ್ಷ್ಮಿಯನ್ನು ಕರೆದು ಹೇಳಿದರು. ಜಯಲಕ್ಷ್ಮಿ ಬಂದು ಮಗು ವನ್ನು ಕರೆದುಕೊಂಡು ಹೋಗುವುದರಲ್ಲಿದ್ದಳು.

ನಾಗಪ್ಪನವರು ಜಯಲಕ್ಷ್ಮಿಯನ್ನು ಬಳಿಗೆ ಕರೆದು —

"ಜಯ, ಸ್ವಲ್ಪ ನಿಂತುಕೊಳ್ಳಮ್ಮಾ. ನಿಮ್ಮ ಯಜಮಾನರು ಹೊಸಮನೆ ಕಟ್ಟಿದ್ದಾರಂತೆ, ಬಹಳ ಸಂತೋಷ. ಗೃಹಪ್ರವೇಶ ಮಾಡಿ ಕೊಂಡು ಹೋಗಬೇಕು ಎಂದು ಬಲವಂತ ಮಾಡುತಾ ಇದ್ದಾರೆ. ಆಗಲಿ ಅಂತ ಒಪ್ಪಿಕೊಂಡಾಯಿತು. ಇದನ್ನು ನಿನ್ನ ತಾಯಿಗೆ ಈಗಲೇ ತಿಳಿಸು. ನಿನ್ನ ಯಜಮಾನರಿಗೆ ಹೇಳಿ ನನಗೂ ಒಂದು ಮನೆ ಕಟ್ಟಿಸಿ ಕೊಡಮ್ಮಾ!"

ಜಯಲಕ್ಷ್ಮಿ ಮುಗುಳುನಗೆ ಬೀರುತ್ತ ಒಳಕ್ಕೆ ಹೋದಳು.

ನಾರಾಯಣಮೂರ್ತಿ ಒಳಕ್ಕೆ ಎದ್ದುಹೋಗಿ, ತನ್ನ ಹಾಸಿಗೆಯನ್ನು ತಂದು ಚಾಪೆಯಮೇಲೆ ಹಾಸಿ, ಮಾವನವರಿಗೆ ಮಲಗಿಕೊಳ್ಳಬೇಕೆಂದು ಸೂಚಿಸಿದ. ನಾಗಪ್ಪನವರಿಗೂ ತೂಕಡಿಕೆ ಬರುತ್ತಿತ್ತು. ಹಾಗೆಯೇ ಮಲಗಿಕೊಂಡರು. ನಾರಾಯಣಮೂರ್ತಿ ಎದ್ದುಹೋಗಿ ತನ್ನ ಕೋಣೆ ಯಲ್ಲಿ ತಾನೂ ಮಲಗಿಕೊಂಡ. ತನ್ನ ಮಾವನವರೊಡನೆ ನಡೆದ ಮೊದಲ ಸಲದ ಬಿಚ್ಚುಮನಸ್ಸಿನ ಈ ಮಾತುಕತೆಯಿಂದ ಅವನ ಮನಸ್ಸಿಗೆ ಬಹಳ ಸಮಾಧಾನ ಉಂಟಾಯಿತು. ಹಿಂದಿನ ವಿಷಯಗಳನ್ನೆಲ್ಲಾ ನೆನಪಿಗೆ ತಂದುಕೊಳ್ಳುತ್ತಿರಲು ಶೇಷುವಿನ ನೆನಪಾಯಿತು. ಶೇಷು ಎಫ್.ಎ. ಪ್ಯಾಸಾದಮೇಲೆ ಬೆಂಗಳೂರಿಗೆ ಹೋಗಿ ಕೆಲಸಕ್ಕೆ ಸೇರಿಕೊಂಡಂದಿನಿಂದ ಈಚೆಗೆ ಅವನಿಂದ ಕಾಗದವೇ ಬಂದಿರಲಿಲ್ಲ. ಗೃಹಪ್ರವೇಶೋತ್ಸವಕ್ಕೆ ಖಂಡಿತ ಬರಬೇಕೆಂದು ಅವನಿಗೊಂದು ಕಾಗದ ಬರೆಯಬೇಕೆಂದು ನಿಶ್ಚಯ ಮಾಡಿದನು.

## ೨೪

## ಜಯಲಕ್ಷ್ಮಿಯ ಪ್ರಭಾವ

ಗೃಹಪ್ರವೇಶೋತ್ಸವ ಸಾಂಗವಾಗಿ ನೆರವೇರಿತು. ಉತ್ಸವದ ದಿನ ನೂರಾರು ಮಂದಿ ಬ್ರಾಹ್ಮಣರು, ನೂರಾರು ಮಂದಿ ಸ್ನೇಹಿತರು, ನೆಂಟರು ಇಷ್ಟರು ಇವರನ್ನೆಲ್ಲ ಕರೆದು ದೊಡ್ಡ ಸಂತರ್ಪಣೆ ಮಾಡಿಸಿದ್ದ. ಇಷ್ಟೇ ಅಲ್ಲದೆ ಬಡಬಗ್ಗರಿಗೆ ಯಥೇಷ್ಟವಾದ ದಾನ ಧರ್ಮವನ್ನೂ ಮಾಡಿದ; ಮತ್ತು ಈ ಶುಭ ಸಂದರ್ಭದ ನೆನಪಾಗಿ ಮೈಸೂರಿನಲ್ಲಿ ಕಟ್ಟಬೇಕೆಂದಿದ್ದ ಅನಾಥಾಲಯದ ಕಟ್ಟಡಕ್ಕಾಗಿ ಐನೂರು ರೂಪಾಯಿಗಳನ್ನು ಅದರ ಅಧಿಕಾರಿಗಳ ವಶಕ್ಕೆ ಕಳಿಸಿಕೊಟ್ಟ. ಕೆಲವು ದಿನಗಳ ವರೆಗೆ ಊರಿನಲ್ಲೆಲ್ಲಾ ನಾರಾಯಣಮೂರ್ತಿಗಳ ಗೃಹಪ್ರವೇಶೋತ್ಸವದ ವಿಜೃಂಭಣೆಯ ಮತ್ತು ಅವನ ಉದಾರ ದಾನ ಧರ್ಮಗಳ ಮಾತೇ ಮಾತಾಗಿತ್ತು.

ಗೃಹಪ್ರವೇಶಕ್ಕೆ ಬಂದಿದ್ದ ನೆಂಟರಿಷ್ಟರೆಲ್ಲಾ ತೆರಳಿದರು. ನಾರಾಯಣಮೂರ್ತಿಯ ಅತ್ತೆ ಮಾವಂದಿರು ಊರಿಗೆ ಹೋದರು. ಅವರು ಹೋಗುವ ಮುನ್ನ ನಾರಾಯಣಮೂರ್ತಿ ಅವರಿಗೆ ಭಾರಿ ಔತಣ ಮಾಡಿ, ಉಡುಗೊರೆಯ ಮರ್ಯಾದೆ ಮಾಡಿ ಕಳಿಸಿಕೊಟ್ಟ. ತಂದೆ ತಾಯಿ ಹೊರಟು ಹೋಗುತ್ತಾರಲ್ಲಾ ಎಂದು ಜಯಲಕ್ಷ್ಮಿಗೆ ಮನೋವ್ಯಥೆ ಉಂಟಾಗಿದ್ದರೂ ಅವರು ಇನ್ನು ಸ್ವಲ್ಪ ಕಾಲದಲ್ಲಿ ಮೈಸೂರಿನಲ್ಲೇ ಬಂದು ನೆಲಸುವರೆಂಬುದನ್ನು ನೆನೆದು ನೆಮ್ಮದಿಯುಂಟಾಯಿತು.

ಸುಬ್ಬಯ್ಯ ಮತ್ತು ಶೇಷು ಇವರನ್ನು ಇನ್ನೂ ಕೆಲವು ದಿನಗಳು ಇಲ್ಲಿಯೇ ಇರಬೇಕೆಂದು ಬಲವಂತ ಮಾಡಿ ಉಳಿಸಿಕೊಂಡಿದ್ದ.

ನಾಗಪ್ಪನವರು ತೆರಳಿ ಎರಡು ಮೂರು ದಿನಗಳಾಗಿದ್ದುವು. ರಾತ್ರಿ ಒಂಬತ್ತು ಗಂಟೆಯ ಸಮಯ. ಸುಬ್ಬಯ್ಯ ಏನೋ ಮೈಗೆ ಸರಿಯಿಲ್ಲ ಅಂತ ಊಟ ಮಾಡಲಿಲ್ಲ; ಮನೆಯ ಮುಂದೆ ಜಗುಲಿಯ ಮೇಲೆ ಕುಳಿತರು. ನಾರಾಯಣಮೂರ್ತಿ ಮತ್ತು ಶೇಷು ಊಟ ಮುಗಿಸಿಕೊಂಡು ಬಂದು ಸುಬ್ಬಯ್ಯನ ಜೊತೆ ಕುಳಿತುಕೊಂಡರು. ಮೂರು ಮಂದಿಯೂ ಕುಳಿತು

ಮಾತನಾಡುತ್ತಾ ಇದ್ದರು. ಜಯಲಕ್ಷ್ಮಿ ಒಂದು ಬೆಳ್ಳಿಯ ಲೋಟದಲ್ಲಿ ಸುಬ್ಬಯ್ಯನವರಿಗೆ ಬಿಸಿ ಬಿಸಿ ಹಾಲು ತಂದುಕೊಟ್ಟಳು. ಉಪಚಾರ ಹೇಳಿಸಿಕೊಳ್ಳದೆ ಸುಬ್ಬಯ್ಯ ಅದನ್ನು ಕುಡಿದು–"ನಾನು ಒಂದು ಲೋಟ ಮಜ್ಜಿಗೆ ಕೇಳಬೇಕೆಂದಿದ್ದೆ. ನೀನು ಹಾಲು ತಂದು ಕೊಟ್ಟೆ ಅಷ್ಟರಲ್ಲೆ. ನೀನು ತಂದು ಕೊಟ್ಟದ್ದನ್ನ ಬೇಡ ಅನ್ನಬಾರದು ಅಂತ ಕುಡಿದಿದ್ದೇನಮ್ಮ. ನಿನ್ನ ಹೊಟ್ಟೆ ತಣ್ಣಗಿರಲಿ" ಎಂದರು.

ಜಯಲಕ್ಷ್ಮಿ ಲೋಟ ತೆಗೆದುಕೊಂಡು ಹೋಗುವಾಗ–"ಮಾವಯ್ಯ, ಅವರು ಹೇಳಿದ ಮಾತನ್ನು ನಡಸಿಕೊಡಿ. ತಿಂಗಳಿಗೆ ೧೫ ರೂಪಾಯಿ ಹೋದರೆ ಹೋಯಿತು. ನಮಗೆ ಹಿರಿಯರಾಗಿ ಇಲ್ಲೇ ಇದ್ದುಕೊಂಡಿರಿ" ಎಂದಳು.

"ಹಾಗೇ ಆಗಲಮ್ಮ. ನೀವು ಸುಮ್ಮನೆ ಬಿಡುತ್ತೀರ. ನಾಣಿ ಬಲವಂತಕ್ಕಿಂತ ನಿನ್ನ ಬಲವಂತ ಹೆಚ್ಚಾಗಿದೆ" ಎಂದರು ಸುಬ್ಬಯ್ಯ. ಜಯಲಕ್ಷ್ಮಿ ತೃಪ್ತಳಾಗಿ ಒಳಕ್ಕೆ ಹೋದಳು.

ಆ ವಿಷಯ ಈ ವಿಷಯ ಮಾತನಾಡುತ್ತಾ ಶೇಷು ವಿಷಯ ಬಂತು.

"ಅಲ್ಲ ಶೇಷು, ಬೆಂಗಳೂರಿಗೆ ಹೋಗಿ ಕೆಲಸಕ್ಕೆ ಸೇರಿದವನು ಅವೊತ್ತಿನಿಂದ ಇವೊತ್ತಿನವರೆಗೆ 'ಹೇಗಿದ್ದಾನೆ ನಮ್ಮ ನಾಣು, ಏನು ಕಥೆ' ಅಂತ ಏನಾದರೂ ಒಂದು ಕಾಗದ ಹಾಕಿದೆಯಾ ?" ಎಂದು ಕೇಳಿದ ನಾಣು.

"ನೋಡು ನಾರಾಯಣಮೂರ್ತಿ, ನಿನಗೇನು ಗೊತ್ತು, ಬೇರೆ ಊರಿನಲ್ಲಿರುವವನಿಗೆ. ಏನೋ ಕೆಲಸ ಅಂತ ಸಿಕ್ಕಿತಲ್ಲಾ ಅಂತ ಮನಸ್ಸು ಸ್ವಲ್ಪ ಸಮಾಧಾನಕ್ಕೆ ಬಂದಿತ್ತು. ನನ್ನ ಮದುವೆಯ ರಾದ್ಧಾಂತ ಎಲ್ಲಾ ನಿನಗೆ ಗೊತ್ತೇ ಇದೆಯಲ್ಲ. ನೀನು ಆಗ ಮೋಸ ಹೋದೆ. ಆದರೂ ಈಗ ಸುಖವಾಗಿದ್ದಿ. ನಾನು ಮೋಸ ಹೋಗಲಿಲ್ಲ. ಕಂಡೂ ಕಂಡೂ ಚಂಡಿಯನ್ನ ಕೈಹಿಡಿದುಕೊಂಡ ಹಾಗಾಗಿದೆ. ರೂಪಿನಲ್ಲಿ ರತಿ. ಗುಣದಲ್ಲಿ ತಾನೇ . . . ನನ್ನ ಹಣೆಬರಹ."

"ಏನು ಶೇಷಪ್ಪ, ನೀನು ಹೇಳುವುದು ?" ಎಂದು ಸುಬ್ಬಯ್ಯ ಕುತೂಹಲದಿಂದ ಕೇಳಿದರು.

"ಏನೂ ಇಲ್ಲ. ಪ್ರಸ್ತಾವದ ಮೇಲೆ ಮೊದಲ ಸಲ ತವರು ಮನೆಗೆ ಹೋದವಳು . . ."

"ಬಸುರಿಯೇನು ಶೇಷು ?" ಎಂದು ನಾಣು ನಡುವೆ ಬಾಯಿ ಹಾಕಿದ ನಗುತ್ತ.

"ಅಲ್ಲ : ಬರಿಯ ಬಯಕೆ. ಹೋಗಬೇಕು ಎಂದಳು, ಕಳಿಸಿಕೊಟ್ಟೆ. ಒಟ್ಟು ಸಂಸಾರದಲ್ಲಿರುವವರೆಗೂ ನಾನು ಬರುವುದಿಲ್ಲ ಎಂದು ಈಗ ಕಾಗದ ಬರೆಯುತ್ತಾಳೆ. ಬೇರೆ ಸಂಸಾರ ಮಾಡಿಕೊಂಡಿರುವುದಾದರೆ ಬರುತ್ತಾಳಂತೆ. ನನ್ನ ತಾಯಿ ಹೋಗಿ ಕರೆದುಕೊಂಡು ಬಾ ಎಂದು ಪೀಡಿಸುತ್ತಾರೆ. ನಾನು ಬೇರೆ ಸಂಸಾರ ಮಾಡೋಣವೆಂದರೆ, ನನಗೆ ಬರುವುದು ನನಗೇ ಸಾಲುವುದಿಲ್ಲ. ನಮ್ಮ ತಂದೆ ಮುದುಕರು. ಬರುವ ಪೆನ್ಷನ್ ಅವರಿಗೂ ಸಾಲದು. ನನ್ನ ಅಕ್ಕನ ಮದುವೆಗೆ ಮಾಡಿದ್ದ ಸಾಲವೇ ತೀರಿಲ್ಲ. ಮದುವೆಯಾಗುವ ತಂಗಿ ಬೇರೆ ಇದ್ದಾಳೆ. ಹೆಂಡತಿಯನ್ನು ಮೆಚ್ಚಿಸಹೋದರೆ ತಂದೆತಾಯನ್ನು ತ್ಯಜಿಸಬೇಕು. ಅವರನ್ನು ಕಟ್ಟಿಕೊಂಡರೆ ಹೆಂಡತಿ ಬಿಡಬೇಕು. ಅತ್ತ ದರಿ, ಇತ್ತ ಹುಲಿ ಆಗಿದೆ."

"ಯಾರನ್ನೂ ಬಿಡಬಾರದು" ಎಂದ ನಾರಾಯಣಮೂರ್ತಿ.

"ನೋಡು, ಅದೇ ತಾನೆ ಕಷ್ಟ."

"ಕಷ್ಟವೇನು ಕಷ್ಟ? ಸಾಲ ತೀರಿಸಿಬಿಟ್ಟರಾಯಿತು."

"ಸಾಲ ತೀರಿಸಬೇಕಾದರೆ ಸಾಲವೇ ಮಾಡಬೇಕು. ಸಾಲ ಕೊಡುವವರು ಯಾರಪ್ಪ?"

"ನಾನು ಕೊಡುತ್ತೇನೆ."

"ನೀನೇನೊ ಕೊಟ್ಟೀಯೆ. ಹಣವಂತ. ಸಾಲ ತೀರಿದರೂ ಸಮಸ್ಯೆ ಬಗೆಹರಿಯುವುದಿಲ್ಲ."

"ಏನು ! ಹಾಗಂದರೇನೋ ?"

"ಏನಂತ ಹೇಳಲಿ ನಾಣು. ಇನ್ನು ಬಿಚ್ಚಿ ಹೇಳಬೇಕು, ಅಷ್ಟೆ."

"ಅತ್ತೆ ಸೊಸೆಗೆ ಆಗುವುದಿಲ್ಲವೇನಯ್ಯಾ?" ಎಂದು ರಾಗ ಎಳೆದರು ಸುಬ್ಬಯ್ಯನವರು.

"ಎಷ್ಟೇ ಆಗಲಿ ಅನುಭವಶಾಲಿಗಳು, ಗೊತ್ತುಹಿಡಿದರು ಸುಬ್ಬಯ್ಯ ನವರು. ನನ್ನ ಹೆಂಡತಿ ಈಗಿನ ಕಾಲದ ತರಹ. ನನ್ನ ತಾಯಿಗೆ ಅದೆಲ್ಲಾ ಸರಿಬೀಳುವುದಿಲ್ಲ. ಒರಟೊರಟಾಗಿ ಅಂದುಬಿಡುತ್ತಾರೆ. ಇದು ಅವಳಿಗೆ ಸೈರಿಸುವುದಿಲ್ಲ."

"ಶೇಷು, ನನಗೆ ತೋರುವುದು ಒಂದೇ ಉಪಾಯ. ನೀನು ನಡಸುವ ಹಾಗಿದ್ದರೆ ಹೇಳುತ್ತೇನೆ" ಎಂದ ನಾಣು.

"ಏನು ?"

"ಸಾಲ ಎಷ್ಟು, ಹೇಳು."

"೫೦೦ ರೂಪಾಯಿ."

"ಇಷ್ಟೇ ತಾನೆ. ನಾನು ಕೊಡುತ್ತೇನೆ. ನಿನಗೆ ಆದಾಗ ಹಿಂದಿರುಗಿಸು. ಸಾಲ ತೀರಿಸಿಕೊ. ನಿಮ್ಮ ತಂದೆಯ ಹೊರೆ ಇಳಿಯುತ್ತೆ. ಅವರ ಪೆನ್‌ಷನ್ನಿನಲ್ಲಿ ಅವರು ಗಂಡ ಹೆಂಡತಿ ಹಳ್ಳಿಗೆ ಹೋಗಿ ಸಂಸಾರ ಮಾಡಿಕೊಂಡಿರಲಿ. ನೀನು ಏನಾದರೂ ಅವರಿಗೆ ಸಾಲದ್ದಕ್ಕೆ ಕಳಿಸುತ್ತಿರು. ಒಂದು ತಿಂಗಳು ರಜ ತೆಗೆದುಕೊಂಡು, ನಿನ್ನ ಹೆಂಡತಿಯನ್ನೂ ಕರೆದು ಕೊಂಡು ಬಂದು ಇಲ್ಲಿರು. ಬೇಜಾರು ಕಳೆಯುವುದಕ್ಕೆ ಸ್ನೇಹಿತನ ಮನೆಗೆ ಹೋಗುವುದಕ್ಕೆ ಎಂದರೆ ನಿನ್ನ ತಾಯಿತಂದೆ ಬೇಡ ಎನ್ನುವುದಿಲ್ಲ. ನೀನು ಬೆಂಗಳೂರಿಗೆ ಹೋಗಿ ಮನೆ ಗೊತ್ತುಮಾಡಿ ಮೊದಲು ನಿನ್ನ ತಾಯಿತಂದೆಗಳನ್ನು ಕರಸಿಕೊ. ವಿಚಾರವನ್ನೆಲ್ಲ ಅವರಿಗೆ ತಿಳಿಸು. 'ನಿಮ್ಮ ಪಾಡಿಗೆ ನೀವು ಇರುವುದಾದರೆ ಹೆಂಡತಿ ಕರಸುತ್ತೇನೆ, ಇಲ್ಲದಿದ್ದರೆ ನನ್ನ ಸ್ನೇಹಿತನ ಮನೆಯಲ್ಲೇ ಇರುತ್ತಾಳೆ' ಎನ್ನು. ನಿನ್ನ ತಾಯಿ ಒಪ್ಪುತ್ತಾರೆ. ಅಷ್ಟುಹೊತ್ತಿಗೆ ನಿನ್ನ ಹೆಂಡತಿ ಇಲ್ಲಿ ಪಳಗಿರುತ್ತಾಳೆ."

"ನಿನಗೊಂದು ದೊಡ್ಡಹೊರೆ, ಅಷ್ಟೆ."

"ಹೊರೆಯೂ ಇಲ್ಲ, ಏನೂ ಇಲ್ಲ. ನೀನು ಸುಮ್ಮನೆ ನಾನು ಹೇಳಿದ ಹಾಗೆ ಕೇಳು."

"ಹಾಗೆ ಮಾಡು ಶೇಷಪ್ಪ. ಖಂಡಿತ ನಿನ್ನ ಹೆಂಡತಿ ಪಾಠ ಕಲಿಯು ತ್ತಾಳೆ. ಇಲ್ಲಿ ಅತ್ತೆ–ಸೊಸೆ–ಅತ್ತಿಗೆ ಎಲ್ಲ ಎಷ್ಟು ಅನ್ಯೋನ್ಯವಾಗಿ ದ್ದಾರೆ ಎಂಬುದನ್ನು ನೋಡಿಯೂ ನಿನ್ನ ಹೆಂಡತಿ ಪಾಠ ಕಲಿಯದೆ

ಹೋದರೆ ಯಾರೂ ಕಲಿಸುವ ಹಾಗಿಲ್ಲ. ಜಯಲಕ್ಷ್ಮಿ ಗುಣಲಕ್ಷ್ಮಿಯಪ್ಪ. ಅವಳ ಜೊತೆ ಎಂಟು ದಿನ ಇದ್ದರೆ ಸಾಕು. ಎಂಥ ಕಲ್ಲೆದೆಯವರೂ ಕರಗಿ ಹೋಗುತ್ತಾರೆ" ಎಂದರು ಸುಬ್ಬಯ್ಯ.

ಶೀನು ಮೌನವಾಗಿದ್ದ.

ಇಷ್ಟು ಹೊತ್ತಿಗೆ ಆಗಲೇ ಸುಬ್ಬಯ್ಯನವರು ಮೂರು ನಾಲ್ಕು ಸರ್ತಿ ಆಕಳಿಸಿ ಚಿಟಕಿ ಹಾಕಿದ್ದನ್ನು ನಾರಾಯಣಮೂರ್ತಿ ನೋಡಿದ್ದ.

"ಬನ್ನಿ ಸುಬ್ಬಯ್ಯ ಮಾವಯ್ಯ. ಪಾಪ, ನಿಮಗೆ ನಿದ್ದೆ, ಮಲಗಿ ಕೊಳ್ಳೋರಂತೆ" ಎಂದು ನಾಣು ಎದ್ದ.

"ಕ್ಷಮಿಸಿ, ಸುಬ್ಬಯ್ಯನೋರೆ. ನನಗೋಸ್ಕರ ನೀವು ಇಷ್ಟು ಹೊತ್ತು ಎಚ್ಚರವಾಗಿರಬೇಕಾಯಿತು" ಎಂದ ಶೀನು.

ಪಕ್ಕದ ಕೊಠಡಿಗೆ ಕರೆದುಕೊಂಡು ಹೋಗಿ, ಹಾಸಿಗೆಯನ್ನು ಹಾಸಿ ಕೊಟ್ಟು, ಸುಬ್ಬಯ್ಯನವರನ್ನು ಮಲಗ ಹೇಳಿದ ನಾರಾಯಣಮೂರ್ತಿ. ಅವನು ಮರಳಿ ಬಂದು –

"ಶೀನೂ, ಖಾಯಿಲೆ ಬೇರೆ ಬಿದ್ದಿದ್ದೆ. ಅದೂ ಅಲ್ಲದೆ ಬೆಳಗ್ಗೆ ರೈಲಿಗೆ ಹೋಗುವುದಕ್ಕೆ ಬೇಗ ಏಳಬೇಕು. ಮಲಗಿಕೊ ಬಾ" ಎಂದು ಅವನನ್ನು ತನ್ನ ಕೊಠಡಿಗೇ ಕರೆದುಕೊಂಡು ಹೋದ. ಜಯಲಕ್ಷ್ಮಿ ಅವರಿಬ್ಬರಿಗೂ ಅಲ್ಲಿ ಹಾಸಿಗೆ ಹಾಸಿದ್ದಳು.

ನಾರಾಯಣಮೂರ್ತಿ ಶೀನು ಮಲಗಿಕೊಂಡೇ ಸ್ವಲ್ಪ ಹೊತ್ತು ಮಾತಾಡುತ್ತಿದ್ದರು.

ಶೀನು ಕೇಳಿದ: "ನಾಣು, ನಿನ್ನನ್ನು ಒಂದು ಪ್ರಶ್ನೆ ಕೇಳಬೇಕೂ ಅಂತ ಎಂದಿನಿಂದಲೂ ಮನಸ್ಸು ತುಡಿಯುತ್ತಾ ಇದೆ. ಕೇಳಬೇಕು, ಆದರೆ ಕೇಳಲಾರೆ. ನೀನು ಏನೂ ತಿಳಿದುಕೊಳ್ಳದೆ ಹೋದರೆ ಕೇಳುತ್ತೇನೆ."

"ಏನು ಶೀನು, ಹೀಗೆ ಮಾತಾಡುತ್ತೀಯೆ! ನೀನು ಏನು ಬೇಕಾದರೂ ಕೇಳಬಹುದು. ಕೇಳುವ ಹಕ್ಕು ನಿನ್ನದು."

"ಹೇಳುವ ಇಲ್ಲವೆ ಬಿಡುವ ಅಧಿಕಾರ ನಿನ್ನದು ಅಲ್ಲವೆ?" ಎಂದು ನಕ್ಕ ಶೀನು.

"ಶೀಮ, ಗೆಳೆಯನಿಂದ ಬಚ್ಚಿಡಬಹುದಾದ್ದು ಏನಿದೆ? ಅಗತ್ಯವಾಗಿ ಕೇಳು. ಖಂಡಿತ ಹೇಳುತ್ತೇನೆ."

"ನಾಣು, ನಿನ್ನ ಹೆಂಡತಿಯನ್ನು ನೀನೇನೂ ಮೆಚ್ಚಿ ಮದುವೆ ಮಾಡಿಕೊಳ್ಳಲಿಲ್ಲ. ಆಮೇಲೂ ಸಹ ಅವಳನ್ನು ನೀನು ಕಡೆಗಣಿಸುತ್ತಿದ್ದೆ. ಅವಳನ್ನು ಈಗ ಇಷ್ಟೊಂದು ಪ್ರೀತಿಸುತ್ತೀಯಲ್ಲ, ಇದು ನನಗೆ ಬಹಳ ಆಶ್ಚರ್ಯವಾಗಿದೆ. ಅವಳು ನಿನ್ನ ಭಾಗದ ಭಾಗ್ಯಲಕ್ಷ್ಮಿಯಾಗಿ ಬಂದಳಲ್ಲ, ಅದಕ್ಕೋ ಹೇಗೆ? ಒರಟು ಪ್ರಶ್ನೆ, ದಯವಿಟ್ಟು ಏನೂ ತಿಳಿದುಕೊಳ್ಳಬೇಡ, ನಾಣು."

"ನಿನ್ನ ಪ್ರಶ್ನೆ ನ್ಯಾಯವಾಗಿಯೇ ಇದೆ, ಸಹಜವಾಗಿಯೂ ಇದೆ. ಆದರೆ ಇಷ್ಟು ಧೈರ್ಯವಾಗಿ ಹೇಳಬಲ್ಲೆ: ಅವಳ ಕಡೆಯಿಂದ ನನಗೆ ತುಂಬ ಹಣ, ಆಸ್ತಿ ಇವು ಬಂದದ್ದಕ್ಕಾಗಿ ಅವಳನ್ನು ನಾನು ಇಷ್ಟು ಪ್ರೀತಿಸುತ್ತಿಲ್ಲ. ನಾನು ಭಾಗ್ಯಲಕ್ಷ್ಮಿಯನ್ನಲ್ಲ ಪ್ರೀತಿಸುತ್ತಿರುವುದು, ಜಯಲಕ್ಷ್ಮಿಯನ್ನು. ಈ ವಿಚಾರ ನನಗೇ ಒಂದು ಸಮಸ್ಯೆಯಾಗಿದೆ. ಬಹುಶಃ ಅವಳ ಗುಣಕ್ಕಾಗಿ ಇದ್ದರೂ ಇರಬಹುದು. ಇದಕ್ಕಿಂತ ಹೆಚ್ಚು ಹೇಳಲಾರೆ."

"ನೀನು ಹೆಚ್ಚು ಹೇಳಲೂ ಬೇಕಿಲ್ಲ. ನಿನ್ನ ಉತ್ತರ ಕೇಳಿ ನನಗೂ ಸಂತೋಷವಾಗಿದೆ, ಸಮಾಧಾನವಾಗಿದೆ. ಜಯಲಕ್ಷ್ಮಿಯ ಸಹವಾಸದಲ್ಲಿ ನನ್ನ ಹೆಂಡತಿಯೂ ತಿದ್ದಿಕೊಳ್ಳುತ್ತಾಳೆ, ನನಗೂ ಸಂಸಾರದಲ್ಲಿ ಸುಖ ಲಭಿಸೀತು ಎಂಬ ಭರವಸೆ ಉಂಟಾಗುತ್ತಿದೆ."

"ಓಹೋ, ಹಾಗಾದರೆ ನಿನ್ನ ಹೆಂಡತಿಯನ್ನು ಕರೆದುಕೊಂಡು ಬರುತ್ತೀ! ಸಂತೋಷ."

ಶೀಮ ಮೌನವಾಗಿದ್ದ. ಅವನ ಮೌನ ಸಮ್ಮತಿಸೂಚಕವೆಂದು ನಾಣುವಿಗೆ ಹೊಳೆಯದೆ ಇರಲಿಲ್ಲ. ಎದ್ದುಹೋಗಿ, ಜಯಲಕ್ಷ್ಮಿಗೂ ಗೌರಿಗೂ ಈ ಸಮಾಚಾರ ತಿಳಿಸಿದ. ಜಯಲಕ್ಷ್ಮಿಯಂತೂ ತುಂಬ ಸಂತೋಷಪಟ್ಟಳು.

ನಾರಾಯಣಮೂರ್ತಿ ತನ್ನ ಕೋಣೆಗೆ ಹಿಂದಿರುಗಿ ಬರುವ ಹೊತ್ತಿಗೆ ಹತ್ತು ಹದಿನೈದು ನಿಮಿಷಗಳಾದುವು. ಅಷ್ಟು ಹೊತ್ತಿಗೆ ಶೀಮ

ನಿದ್ದೆಹೋಗಿ, ಗೊರಕೆ ಹೊಡೆಯುತ್ತಿದ್ದ. ನಾರಾಯಣಮೂರ್ತಿ ದೀಪ ಆರಿಸಿ ಮಲಗಿಕೊಂಡ.

ಶೇಷು ತನ್ನ ಹೆಂಡತಿ ಪಾರ್ವತಿಯನ್ನು ಕರೆದುಕೊಂಡು ಬಂದು ನಾರಾಯಣಮೂರ್ತಿಯ ಮನೆಯಲ್ಲಿದ್ದ. ಅವನು ಹದಿನೈದು ದಿನಗಳು ಮಾತ್ರ ರಜ ತೆಗೆದುಕೊಂಡು ಬಂದಿದ್ದ. ತನ್ನ ಹಂಡತಿಯೊಬ್ಬಳನ್ನೆ ನಾರಾಯಣಮೂರ್ತಿಯ ಮನೆಯಲ್ಲಿ ಎರಡು ತಿಂಗಳ ಕಾಲ ಬಿಟ್ಟಿದ್ದ. ಬೆಂಗಳೂರಿನಲ್ಲಿ ಮನೆ ಮಾಡಿ, ತನ್ನ ತಾಯಿ ತಂದೆಗಳನ್ನು ಕರಸಿಕೊಂಡು, ತರುವಾಯ ಮೈಸೂರಿಗೆ ಬಂದು ತನ್ನ ಹೆಂಡತಿಯನ್ನು ಕರೆದುಕೊಂಡು ಹೋದ. ಭಾಗ್ಯಲಕ್ಷ್ಮಿಯ ವರ್ಷದ ಹೆಚ್ಚಾಗುವವರೆಗೂ ಪಾರ್ವತಿಯನ್ನು ಬಿಟ್ಟಿರಬೇಕೆಂದು ಎಲ್ಲರೂ ಬಲವಂತ ಮಾಡಿದರು. ತನ್ನ ತಂದೆ ತಾಯಿ ಅವಳನ್ನು ಖಂಡಿತ ಕರೆದುಕೊಂಡು ಬರಬೇಕೆಂದು ಒತ್ತಾಯಪಡಿಸುತ್ತಿದ್ದಾರೆಂದು ಹೇಳಿ, ಶೇಷು ಹೆಂಡತಿಯನ್ನು ಕರೆದುಕೊಂಡು ಹೋದ. ಬೆಂಗಳೂರಿಗೆ ಹೋದ ಮೇಲೆ ಶೇಷು ನಾರಾಯಣಮೂರ್ತಿಗೆ ತಲಪಿದ್ದಕ್ಕೆ ಒಂದು ಕಾಗದ ಬರೆದಿದ್ದ. ಕೆಲವು ಕಾಲ ಬಿಟ್ಟುಕೊಂಡು ಮತ್ತೊಂದು ಕಾಗದ ಬರೆದ. ಈ ಕಾಗದವನ್ನು ನಾರಾಯಣಮೂರ್ತಿ ಓದಿಕೊಂಡು, ಜಯಲಕ್ಷ್ಮಿಗೂ ಓದಿದ. ಕಾಗದದ ಮುಖ್ಯ ಭಾಗ ಇದು :

‘. . . ನೀನು ಕೊಟ್ಟ ಮದ್ದು ಪರಿಣಾಮಕಾರಿಯಾಗಿದೆ. ಈಗ ಪಾರ್ವತಿ ತೀರ ಬದಲಾಯಿಸಿಬಿಟ್ಟಿದ್ದಾಳೆ. ಮನೆಗೆಲಸವೆಲ್ಲ ಅವಳದ್ದೆ. ಅತ್ತೆ ಮಾವಂದಿರನ್ನು ತುಂಬ ಗೌರವದಿಂದ ಕಂಡುಕೊಂಡಿದ್ದಾಳೆ. ನೀನು ಉಡುಗೊರೆಯಾಗಿ ಕೊಟ್ಟ ಸೀರೆಯನ್ನು ತುಂಬ ಮೆಚ್ಚಿದ್ದಾಳೆ. ಜಯಲಕ್ಷಮ್ಮನನ್ನೂ ಗೌರಮ್ಮನವರನ್ನೂ ಪದೇ ಪದೇ ನೆನೆಯುತ್ತಿದ್ದಾಳೆ. ಭಾಗ್ಯಲಕ್ಷ್ಮಿಯ ವರ್ಷದ ಹೆಚ್ಚಿನ ವರೆಗೂ ಇರಬೇಕೆಂದು ಅವಳ ಮನಸ್ಸಿನಲ್ಲಿ ಆಸೆಯಿತ್ತಂತೆ . . . ಇನ್ನು ನೀನು ನನಗೆ ಮಾಡಿರುವ ಇನ್ನೊಂದು ಉಪಕಾರವನ್ನಂತೂ ನಾವು ಯಾರೂ ಎಂದಿಗೂ ಮರೆಯುವಂತಿಲ್ಲ . . . ದೇವರು ಅನುಕೂಲ ಕೊಟ್ಟಾಗ ಹಣ ಹಿಂತಿರುಗಿಸುತ್ತೇನೆ . . . ಕ್ಷೇಮಸಮಾಚಾರಕ್ಕೆ ಕಾಗದ ಹಾಕು. ನಮ್ಮ ನಮಸ್ಕಾರ

ಗಳನ್ನು ವೆಂಕಮ್ಮನವರಿಗೂ ಗೌರಮ್ಮನವರಿಗೂ ತಿಳಿಸು. ಇತಿ ನಿನ್ನ ಶೇಷು.'

ಇದಕ್ಕೆ ನಾರಾಯಣಮೂರ್ತಿ ಹೀಗೆ ಉತ್ತರ ಬರೆದ:

'... ಮದ್ದು ಸೂಚಿಸಿದವನು ನಾನು. ಆ ಮದ್ದೆಂದರೆ ನನ್ನ ಹೆಂಡತಿಯ ಪ್ರಭಾವ; ಜೊತೆಗೆ ನನ್ನ ಅಕ್ಕನದೂ ಸ್ವಲ್ಪ. ಅಂತೂ ಈಗ ನೀನು ಸುಖವಾಗಿರುವುದು ಸಂತೋಷದ ಸಂಗತಿ. ಹಣದ ವಿಚಾರ ನೀನು ಏನೂ ಯೋಚನೆ ಮಾಡಬೇಡ. ನಿನ್ನ ಸಾಲದ ಹೊರೆ ಇಳಿಯಿತಲ್ಲ, ಅಷ್ಟೇ ಸಾಕು. ನಿನಗೆ ದೇವರು ಅನುಕೂಲ ಕೊಟ್ಟಾಗ, ಆ ಹಣವನ್ನು ಯಾವುದಾದರೂ ದಾನ ಧರ್ಮ ಕಾರ್ಯಕ್ಕೆ ವಿನಿಯೋಗಿಸು. ನನಗೆ ಹಣ ಸಂದಂತಾಗುತ್ತದೆ... ಸೌ|| ಪಾರ್ವತಮ್ಮನಿಗೆ ನಮ್ಮೆಲ್ಲರ ನೆನಪು ಕೊಡು... ಇತಿ ನಿನ್ನ ನಾಣು.'

*   *   *

ಸುಬ್ಬಯ್ಯನವರೇನೋ ಭಾಗ್ಯಲಕ್ಷ್ಮಿಯ ವರ್ಷದ ಹೆಚ್ಚಿನ ವರೆಗೂ ರಜ ತೆಗೆದುಕೊಂಡು ಇದ್ದುಬಿಟ್ಟರು. ಆ ಮಧ್ಯದಲ್ಲಿ ಅವರಿಗೆ ನಂಜನಗೂಡಿಗೆ ವರ್ಗವಾಗಿತ್ತು. ರಜ ತೀರಿದ ಮೇಲೆ, ಜಯಲಕ್ಷ್ಮಿ ನಾರಾಯಣಮೂರ್ತಿ ಎಷ್ಟು ಹೇಳಿದರೂ ಕೇಳದೆ, "ಇಂಥ ಒಳ್ಳೆಯ ಅವಕಾಶ ಬಿಡುವುದೇ ಅಮ್ಮ. ನಂಜನಗೂಡಿನಲ್ಲಿ ಸ್ವಾಮಿಯ ಸನ್ನಿಧಿಯಲ್ಲಿ ಇರುವ ಭಾಗ್ಯ ಬಿಡಲೆ? ನಂಜನಗೂಡಿನಿಂದ ಬೇರೆಯ ಊರಿಗೆ ವರ್ಗವಾದರೆ ಖಂಡಿತ ಬರುತ್ತೇನಮ್ಮ. ಎಷ್ಟು 'ಪಿಂಚಿನ್' ಬಂದರೆ ಅಷ್ಟೇ ಬರಲಿ. ನನಗೇನು ಮಕ್ಕಳೇ ಮರಿಯೇ? ನೀವೇ ನನ್ನ ಮಕ್ಕಳಮ್ಮ. ಸದ್ಯಕ್ಕೆ ನನ್ನನ್ನ ಬಲವಂತ ಮಾಡಬೇಡಿ" ಎಂದು ನಂಜನಗೂಡಿಗೆ ಹೊರಟು ಹೋದರು.

೨೫

## ನಿಷ್ಕಾಮ ಸೇವೆ

ಭಾಗ್ಯಲಕ್ಷ್ಮಿ ಬೆಳೆಬೆಳೆದಂತೆ ನಾರಾಯಣಮೂರ್ತಿಯ ಭಾಗ್ಯವೂ ಬೆಳೆಯುತ್ತಾ ಬಂತು. ಭಾಗ್ಯವೆಂದರೆ ಬರಿಯ ಹಣ ಕಾಸಿನ ಭಾಗ್ಯವಲ್ಲ– ಸಂತಾನ ಭಾಗ್ಯ, ಪ್ರೇಮದ ಭಾಗ್ಯ, ಸ್ನೇಹ ಭಾಗ್ಯ, ಸ್ಥಾನ ಮಾನಗಳ ಭಾಗ್ಯ, ಸದ್ಗುಣ ಭಾಗ್ಯ, ಒಂದು ಮಾತಿನಲ್ಲಿ–ಸಕಲ ಸೌಭಾಗ್ಯ ನಾರಾಯಣಮೂರ್ತಿಯ ಪಾಲಿಗೆ ಬಂತು. ಹಣಕಾಸೂ ಸಹ ದಿನ ದಿನಕ್ಕೆ ಕೂಡುತ್ತ ಬಂತು.

ನಾರಾಯಣಮೂರ್ತಿ ಮಾತ್ರ ತನ್ನ ಭಾಗ್ಯ ಬೆಳೆದಂತೆ ಬೀಗಿ ಬೆಡಗು ತೋರುತ್ತಿರಲಿಲ್ಲ. ತಾನು ಹುಟ್ಟಿದ್ದು ಬಡವನಾಗಿ, ಸಾಯು ವಂದು ತನ್ನೊಡನೆ ಏನೂ ಬರುವುದಿಲ್ಲ, ಆದ್ದರಿಂದ ಮೂರು ದಿನದ ಮೆರೆತದಿಂದೇನು ಪ್ರಯೋಜನ ಎಂಬುದನ್ನು ನಾರಾಯಣಮೂರ್ತಿ ಚೆನ್ನಾಗಿ ಅರಿತಿದ್ದನು. ಆದರೂ, ಮನೆಯವರ ಆಸೆ ಆಕಾಂಕ್ಷೆಗಳನ್ನು ಸಲ್ಲಿಸಲು ಕಾರ್ಪಣ್ಯಪಡುತ್ತಿರಲಿಲ್ಲ. ಮಗನ ಶುಭವನ್ನು ಕೋರಿ, ವೆಂಕಮ್ಮನವರು ತಾವು ಮಾಡಬೇಕಾಗಿದ್ದ ಋಷಿಪಂಚಮಿ ಮುಂತಾದ ವ್ರತಗಳನ್ನು ಕೈಕೊಂಡರು. ಜಯಲಕ್ಷ್ಮಿ ಪ್ರತಿ ಶುಕ್ರವಾರವೂ ಲಕ್ಷ್ಮೀ ಪೂಜೆ ಮಾಡುತ್ತ, ಅನೇಕ ಬಡ ಮುತ್ತೈದೆಯರನ್ನು ಬಗೆ ಬಗೆಯ ದಾನ ಗಳಿಂದ ತೃಪ್ತಿಪಡಿಸುತ್ತಿದ್ದಳು. ನಾರಾಯಣಮೂರ್ತಿ ಆಗಿಂದಾಗ್ಗೆ ಸತ್ಯನಾರಾಯಣ ಪೂಜೆಯನ್ನು ವಿಜೃಂಭಣೆಯಿಂದ ಮಾಡುತ್ತಿದ್ದನು.

ನಾರಾಯಣಮೂರ್ತಿಗೆ ಬಡತನದ ಬೇಗೆಯ ಅರಿವು ಚೆನ್ನಾಗಿದ್ದು ದರಿಂದ, ಬರಿಯ ಸತ್ಯನಾರಾಯಣ ಪೂಜೆಯಲ್ಲಿ ಮಾತ್ರ ನಿರತನಾಗಿರದೆ ದರಿದ್ರ ನಾರಾಯಣ ಸೇವೆಯಲ್ಲೂ ನಿರತನಾಗಿದ್ದನು. ತಾನು ವಿದ್ಯಾರ್ಥಿ ಯಾಗಿದ್ದಾಗ ವಿದ್ಯಾಭ್ಯಾಸಕ್ಕೆ ಎಷ್ಟು ಕಷ್ಟಪಡುತ್ತಿದ್ದನೆಂಬುದನ್ನು ನೆನೆದು, ಬಡ ವಿದ್ಯಾರ್ಥಿಗಳ ವಿಷಯದಲ್ಲಿ ಬಹಳ ಕನಿಕರ ತೋರಿ, ಕೈಲಾದಮಟ್ಟಿಗೆ ಸಹಾಯ ಮಾಡುತ್ತಿದ್ದನು. ಭಿಕ್ಷಾನ್ನಕ್ಕೆ ಹುಡುಗರು ಬಂದರೆ ಅವರ ಪೂರ್ವೋತ್ತರಗಳನ್ನು ವಿಚಾರಿಸಿ–ಅವರು ಯಾವ

ಬ್ರಾಹ್ಮಣ ಪಂಗಡಕ್ಕೇ ಸೇರಿರಲಿ–ಅವರನ್ನು ತನ್ನ ಮನೆಯಲ್ಲೇ ಇಟ್ಟುಕೊಂಡು ಅನ್ನ ಬಟ್ಟೆ ಕೊಡುತ್ತಿದ್ದನು. ನಾರಾಯಣಮೂರ್ತಿ ಅನಾಥಾಲಯಕ್ಕೂ ಆಗಾಗ್ಗೆ ಬೇಕಾದಷ್ಟು ದಾನ ಮಾಡಿದ್ದರೂ ಸಹ, ಅಲ್ಲಿ ಸ್ಥಳ ಸಿಕ್ಕದವರಿಗೆಲ್ಲ ಅವನ ಮನೆಯಲ್ಲಿ ತಪ್ಪದೆ ಊಟ ವಸತಿ ದೊರೆಯುತ್ತಿದ್ದುವು. ಬರು ಬರುತ್ತ, ನಾರಾಯಣಮೂರ್ತಿಯ ಮನೆಯೇ ಒಂದು ಅನಾಥಾಲಯವಾಗಿ ಪರಿಣಮಿಸಿತು.

ಬ್ರಾಹ್ಮಣರಲ್ಲದ ಬಡಜನಕ್ಕೂ, ತಿರುಕರಿಗೂ, ಕಂಗಾಳಿಗಳಿಗೂ ನಾರಾಯಣಮೂರ್ತಿ ಇಲ್ಲವೆನ್ನದೆ ದಾನ ಮಾಡುತ್ತಿದ್ದನು. ಅವನ ಮನೆಯ ಬಾಗಿಲಿಗೆ ಕೈಯೊಡ್ಡಿ ಬಂದವರು ಯಾರೂ 'ಇಲ್ಲ' ಎನ್ನಿಸಿಕೊಂಡು ಹಿಂದಿರುಗುತ್ತಿರಲಿಲ್ಲ; ಹರುಷದಿಂದ ಕೂಡಿ, ಮನೆಗೆ ಶ್ರೇಯಸ್ಸು ಕೋರಿ, ಹಿಂದಿರುಗುತ್ತಿದ್ದರು. ಭಿಕ್ಷದವರು ಬಂದರೆ ಕೈಯಲ್ಲಿ ಅಕ್ಕಿ ಹಾಕಕೂಡ ದೆಂದೂ, ಸುಮಾರು" ಪಾವಿನಳತೆಯ ಪಂಚಪಾತ್ರೆಯಲ್ಲೇ ಹಾಕ ಬೇಕೆಂದೂ ನಾರಾಯಣಮೂರ್ತಿ ಕಟ್ಟುಮಾಡಿದ್ದನು. ದಾರಿಯಲ್ಲಿ ತಿರುಕರು ಬಿಡಿಕಾಸು ಬೇಡಿದರೆ ಒಂದು ಆಣೆ ಕೊಟ್ಟು ಬಿಡುತ್ತಿದ್ದನು.

ನಾರಾಯಣಮೂರ್ತಿಯ ದಾನ ಧರ್ಮ ಪ್ರವೃತ್ತಿ ಮನೆಯಲ್ಲಿ ಮಾತ್ರವಲ್ಲದೆ ಸಾರ್ವಜನಿಕ ಕ್ಷೇತ್ರದಲ್ಲೂ ಚೆನ್ನಾಗಿ ಬೆಳಗುತ್ತಿತ್ತು. ತನ್ನ ಮನೆಯ ಸಮೀಪದಲ್ಲಿ ಒಂದು 'ರಾಮ ಮಂದಿರ'ವನ್ನು ಕಟ್ಟಿಸಿ, ಅಲ್ಲಿ ಪಾಮರರ ಪ್ರಯೋಜನಕ್ಕಾಗಿ ನಿತ್ಯಾರಾಧನೆ, ಪುರಾಣ, ಪುಣ್ಯಕಥೆ, ಭಜನೆ ಮುಂತಾದುವುಗಳನ್ನು ಸ್ವಂತ ಖರ್ಚಿನಿಂದ ನಡಸಿಕೊಂಡು ಬರುತ್ತಿದ್ದನು. ಮತ್ತು, ಅದೇ ಸ್ಥಳದಲ್ಲಿ ಒಂದು ವಾಚನಾಲಯವನ್ನೂ ಕೂಲಿಕಾರರಿಗಾಗಿ ಒಂದು ರಾತ್ರಿ ಪಾಠಶಾಲೆಯನ್ನೂ ಏರ್ಪಡಿಸಿದನು.

ಮೈಸೂರಿನ ನವರಾತ್ರಿ ಹಬ್ಬಕ್ಕೆ ಎಂದಿನಿಂದಲೂ ನಾನಾ ಕಡೆ ಗಳಿಂದ 'ನೋಟ' ನೋಡುವುದಕ್ಕಾಗಿ ಜನ ತಂಡೋಪತಂಡವಾಗಿ ಬರುವುದು ಪ್ರಸಿದ್ಧವಾಗಿಯೇ ಇದೆಯಷ್ಟೆ. ಅಂದು ಇಂದಿನಷ್ಟು ಹೋಟೆಲುಗಳು ಇರಲಿಲ್ಲ; ಇದ್ದರೂ ಸಹ ಹಳ್ಳಿಯ ಬಡ ಜನ ಹತ್ತು ದಿನವೂ ದುಡ್ಡುಕೊಟ್ಟು ಊಟಮಾಡುವುದೆಲ್ಲಿ ಸಾಧ್ಯ? ಆದ್ದರಿಂದ ಪರಸ್ಥಳದವರ ಸೌಕರ್ಯಕ್ಕಾಗಿ ಶ್ರೀಮನ್ಮಹಾರಾಜರು ಪೂರ್ಣಯ್ಯನ

ಛತ್ರದಲ್ಲಿ ಹತ್ತು ದಿನವೂ ಬ್ರಾಹ್ಮಣ ಸಂತರ್ಪಣೆಗೆ ಏರ್ಪಾಡು
ಮಾಡಿದ್ದರು ; ಬ್ರಾಹ್ಮಣೇತರರಿಗೆ ಮಂಡಿ ಪೇಟೆಯ ವರ್ತಕರೆಲ್ಲ ಸೇರಿ
ಹತ್ತು ದಿನವೂ ಭೋಜನದ ಏರ್ಪಾಡು ಮಾಡುವುದು ಪದ್ಧತಿ. ಇಷ್ಟಾ
ದರೂ, ಬಂದ ಜನಕ್ಕೆ ಊಟ ಒದಗಿಸುವುದು ದುಸ್ಸಾಧ್ಯವಾಗುತ್ತಿತ್ತು.
ಬಡವರು ಮತ್ತು ಪರಸ್ಥಳದವರ ಜೊತೆಗೆ ಸ್ಥಳದ ಬಡವರೂ ಬಡವರಲ್ಲ
ದವರೂ ಈ ಏರ್ಪಾಡಿನ ಅನುಕೂಲತೆಯ ಪ್ರಯೋಜನ 'ಗಿಟ್ಟಿಸಿ'ಕೊಳ್ಳು
ತ್ತಿದ್ದುದರಿಂದ ಏರ್ಪಾಡು ಅವ್ಯವಸ್ಥೆಗಿಟ್ಟುಕೊಳ್ಳುತ್ತಿತ್ತು. ಪರಿಣಾಮ
ವಾಗಿ, ಏನೂ ತಿಳಿಯದ ಹಳ್ಳಿಯ ಜನ ಹಸಿದಿರಬೇಕಾಗುತ್ತಿತ್ತು. ಈ
ಪರಿಸ್ಥಿತಿಯನ್ನರಿತು, ನಾರಾಯಣಮೂರ್ತಿ ನವರಾತ್ರಿಯಲ್ಲಿ ಒಂದು
ತಾತ್ಕಾಲಿಕ ಅನ್ನಸತ್ರ ಏರ್ಪಡಿಸುತ್ತಿದ್ದ: ಅಲ್ಲಿ ಬ್ರಾಹ್ಮಣರಿಗೂ
ಬ್ರಾಹ್ಮಣೇತರರಿಗೂ ಬೇರೆ ಬೇರೆ ಊಟದ ಏರ್ಪಾಡಿತ್ತು. ಶಿಸ್ತಿನ
ಮೇಲ್ವಿಚಾರಣೆ ಇದ್ದುದರಿಂದ ಸ್ಥಳದವರು ಅಲ್ಲಿ ಕಾಲಿಡುವಂತಿರಲಿಲ್ಲ.

ನಾರಾಯಣಮೂರ್ತಿಯ ಔದಾರ್ಯ ಪ್ರಕರಣವನ್ನು ಹೀಗೆಯೇ
ಇನ್ನೂ ಬೆಳಸಿಕೊಂಡು ಹೋಗಬಹುದು. ಅವನಿಗೆ ಅಧಿಕೃತವಾದ
ಬಿರುದು ಯಾವುದೂ ಬಾರದಿದ್ದರೂ, 'ದೀನಜನ ಬಂಧು' ಎಂಬ
ಬಿರುದು ಅವನಿಗೆ ಅನ್ವಯಿಸುವಂತಿತ್ತು ; ನೆರೆಹೊರೆಯವರೂ ಊರಿನ
ಅನೇಕ ಜನರೂ ನಾರಾಯಣಮೂರ್ತಿಯಲ್ಲಿ ವಿಶೇಷ ಪ್ರೀತಿ ಗೌರವ
ಇಟ್ಟಿದ್ದರು. ಅವನು ಮಾಡುತ್ತಿದ್ದ ಸೇವೆ ಅಲ್ಲಿ ಇಲ್ಲಿ ಚೆದರಿಹೋಗಿ
ಇಡಿಯಾಗಿ ಕಾಣದೆ ಹೋದದ್ದರಿಂದ ಅವನಿಗೆ ಅರಮನೆಯ ಮನ್ನಣೆ
ದೊರೆಯಲಿಲ್ಲವೆಂದು ತೋರುತ್ತದೆ. ಅದಕ್ಕಾಗಿ ಅವನು ಬಯಸಿದವನೂ
ಅಲ್ಲ. ಅವನ ದಾನವೆಲ್ಲವೂ ಪ್ರತಿಫಲಾಪೇಕ್ಷೆಯಿಲ್ಲದ್ದಾಗಿತ್ತು ; ಇಂತಹ
ದಾನವೇ ನಿಜವಾದ ದಾನ. 'ಎಲೆಮರೆಯ ಕಾಯಂತೆ ಇದ್ದುಕೊಂಡು
ನಿಷ್ಕಾಮಕರ್ಮ ಮಾಡಬೇಕು' ಎಂಬುದೇ ನಾರಾಯಣಮೂರ್ತಿಯ
ಆದರ್ಶವಾಗಿತ್ತು.

* * *

ನಾರಾಯಣಮೂರ್ತಿಗೆ ಒಂದು ಗಂಡುಮಗುವಾದ ಮೇಲೆ,
ವೆಂಕಮ್ಮನವರು ಕಾಶಿ ರಾಮೇಶ್ವರ ಯಾತ್ರೆ ಮಾಡಿಕೊಂಡು ಬಂದರು.

ತಾವು ಹಿಡಿದಿದ್ದ ವ್ರತಗಳ ಉದ್ಯಾಪನೆಯನ್ನೂ ಮಾಡಿದರು. ಅವರ ಬಯಕೆ ಯಾವುದೂ ಉಳಿದಿರಲಿಲ್ಲ. ಅವಿಶ್ರಾಂತ ಗೃಹಕೃತ್ಯನಿರ್ವಾಹ, ತೀರ್ಥಯಾತ್ರೆ, ವ್ರತಾಚರಣೆಗಳಿಂದ ಬಡುಗಿದ್ದ ಅವರ ದೇಹದಿಂದ ಅವರ ಆತ್ಮ ಒಂದು ಏಕಾದಶಿ ದಿನ ಇದ್ದಕ್ಕಿದ್ದ ಹಾಗೇ ಬಿಟ್ಟುಹೋಯಿತು.

ವೆಂಕಮ್ಮನವರು ತೀರಿಹೋದ ಸಂದರ್ಭದಲ್ಲಿ ಬಂದಿದ್ದ ಸುಬ್ಬಯ್ಯನವರು ನಾರಾಯಣಮೂರ್ತಿಯ ಮನೆಯಲ್ಲೇ ಇದ್ದುಬಿಟ್ಟು, ತಾವು ಹಿಂದೆ ಕೊಟ್ಟಿದ್ದ ಮಾತನ್ನು ನಡಸಿಕೊಟ್ಟರು. "ಹಿಂದೆಯೇ ಬರಬಾರದಾಗಿತ್ತೆ?" ಎಂದು ಜಯಲಕ್ಷ್ಮಿ ಕೇಳಿದ್ದಕ್ಕೆ, ಶಕ್ತಿಯಿರುವವರೆಗೂ ದುಡಿಯಬೇಕೆಂದು ಹಾಗೆ ಮಾಡಿದರೆಂದೂ ಈಗ ವೆಂಕಮ್ಮನವರು ತೀರಿಹೋದದ್ದರಿಂದ ನಾರಾಯಣಮೂರ್ತಿಗೆ ನೆರವಾಗುವುದು ತಮ್ಮ ಕರ್ತವ್ಯವೆಂದೂ ಹೇಳಿ, ಮನೆವಾರ್ತೆಯನ್ನೆಲ್ಲ ನೋಡಿಕೊಳ್ಳುತ್ತಿದ್ದರು. ತಮಗೆ ಬರುತ್ತಿದ್ದ ೬ ರೂಪಾಯಿ 'ಪಿಂಚಿನ್ನ'ನ್ನು, ನಾರಾಯಣಮೂರ್ತಿ ಎಷ್ಟು ಬೇಡವೆಂದರೂ ಕೇಳದೆ, 'ನನಗೆ ಯಾಕೆ? ನನಗೆ ಮಕ್ಕಳಿಲ್ಲ ಮರಿಯಿಲ್ಲ. ನಿನಗೆ ಕೊಟ್ಟರೆ ಯಾವುದಾದರೂ ಧರ್ಮಕ್ಕೆ ಉಪಯೋಗಿಸುತ್ತಿ. ನನಗೂ ಪುಣ್ಯ ಬರುತ್ತೆ' ಎಂದು ಕೊಟ್ಟುಬಿಡುತ್ತಿದ್ದರು.

ವೆಂಕಮ್ಮನವರು ತೀರಿಹೋಗಿ ಒಂದು ವರ್ಷವಾದ ಮೇಲೆ ನಾರಾಯಣಮೂರ್ತಿಗೆ ಇನ್ನೊಂದು ಗಂಡು ಮಗು ಆಯಿತು. ಮೊದಲನೆಯ ಗಂಡಿನ ಹೆಸರು ರಾಮಮೂರ್ತಿ; ಎರಡನೆಯದರ ಹೆಸರು ವೆಂಕಟೇಶಮೂರ್ತಿ.

ವೆಂಕಮ್ಮನವರು ತೀರಿಹೋದ ಮೇಲೆ, ಜಯಲಕ್ಷ್ಮಿ ಎಷ್ಟು ಬೇಡವೆಂದರೂ ಕೇಳದೆ, ಗೌರಿ ಮಡಿ ಹಿಡಿದು, ಮನೆಯ ಯಜಮಾನಿಕೆಯನ್ನು ತಾನೇ ವಹಿಸಿಕೊಂಡು, ತಾಯಿಯ ಸ್ಥಾನದಲ್ಲಿ ತಾನು ನಿಂತಳು. ಗೌರಿಯ ಸ್ವಾರ್ಥತ್ಯಾಗವನ್ನು ಕಂಡು ಗಂಡಹೆಂಡಿರಿಬ್ಬರೂ ಹರ್ಷ-ದುಃಖ ಸೂಚಕವಾದ ಕಂಬನಿ ಸುರಿಸಿದರು.

ಜಯಲಕ್ಷ್ಮಿ, ಗೌರಿಯಲ್ಲಿ ತಾನು ಎಂದಿನಿಂದ ತೋರುತ್ತಿದ್ದ ಆದರ ವಿಶ್ವಾಸಗಳ ಜೊತೆಗೆ, ತನ್ನ ಅತ್ತೆಯಲ್ಲಿ ಇಟ್ಟಿದ್ದ ಭಕ್ತಿ ಗೌರವದ ಕಾಣಿಕೆಯನ್ನೂ ಗೌರಿಗೇ ಅರ್ಪಿಸಿದಳು.

೨೬

## ಭಾಗ್ಯಲಕ್ಷ್ಮಿ ಬಡವರ ಮನೆ ಸೇರಿದಳು

ನಾರಾಯಣಮೂರ್ತಿಗಳು ತಮ್ಮ ಮಗಳಿಗೆ ಗಂಡು ನೋಡಲು ಪ್ರಯತ್ನಪಡುತ್ತಿದ್ದರು. ಅವರ ಮನೆಯಲ್ಲಿ ಓದಿಕೊಂಡಿದ್ದ ಸ್ವಜನದ ಹುಡುಗರ ಜಾತಕಗಳು ಅನುಕೂಲವಾಗಿರಲಿಲ್ಲ. ನಾನು ಒಬ್ಬ ವರನನ್ನು ಅವರ ಮನೆಗೆ ಕರೆದುಕೊಂಡು ಹೋಗಿದ್ದೆ. ಅವನು ಅನಾಥಾಲಯದ ವಿದ್ಯಾರ್ಥಿಯೆಂದು ತಿಳಿದಾಗ ಅವರು ತಾವೂ ಅನಾಥಾಲಯದ ವಿದ್ಯಾರ್ಥಿಯಾಗಿದ್ದು, ತಕ್ಕಮಟ್ಟಿಗೆ ಭಾಗ್ಯವಂತರಾದ, ತಮ್ಮ ಮನೆಗೆ ಆ "ಭಾಗ್ಯಲಕ್ಷ್ಮಿ" ಬಂದ ಪರಿಯನ್ನು ನನಗೆ ವಿವರಿಸಿ ಹೇಳಿದರು. ಅವರು ಹೇಳಿದ್ದು ಬರಿಯ ಸಂಗತಿಗಳ ಸರಣಿ, ಅಷ್ಟೆ; ಆ ಸಂಗತಿಗಳನ್ನು ತಕ್ಕ ಹಿನ್ನೆಲೆಯ ಮುಂದಿಟ್ಟು, ಸತ್ಯಾಂಶಗಳಿಗೆ ವಿರೋಧ ಬಾರದಂತೆ ಹಲ ಕೆಲವು ಹೊಸ ಅಂಶಗಳನ್ನೂ ಸನ್ನಿವೇಶಗಳನ್ನೂ ಸೇರಿಸಿ, ನನ್ನ ಕಲ್ಪನೆಯ ಬೆಳಕಿನಲ್ಲಿ ಕಂಡ ರೀತಿಯಲ್ಲಿ ಚಿತ್ರಿಸಿದ್ದೇನೆ; ಸಂಭಾಷಣೆಯೆಲ್ಲವೂ ಸ್ವಕಲ್ಪಿತ. ನಾರಾಯಣಮೂರ್ತಿಗಳು ತಮ್ಮ ದಾನಧರ್ಮದ ಬಗ್ಗೆ ಏನನ್ನೂ ಹೇಳಲಿಲ್ಲ; ಆತ್ಮಪ್ರಶಂಸೆ ಅವರ ಸ್ವಭಾವವಲ್ಲ. ಅವನ್ನು ನಾನೇ ಬಲ್ಲೆನಾದ್ದರಿಂದ, ಅಪ್ರಕೃತವಾಗದೆಂದು ಸೇರಿಸಿದ್ದೇನೆ.

ನಾರಾಯಣಮೂರ್ತಿಗಳು ತಮ್ಮ ತಾರುಣ್ಯದಲ್ಲಿ ಆ ಕಪ್ಪು ಹುಡುಗಿಯನ್ನು ಅಷ್ಟಾಗಿ ಕಡೆಗಾಣುತ್ತಿದ್ದು, ಒಂದು ದಿನ ಇದ್ದಕ್ಕಿದ್ದ ಹಾಗೆ ಅವಳನ್ನು ತಮ್ಮ ಹೃದಯೇಶ್ವರಿಯಾಗಿ ಸ್ವೀಕರಿಸಿದ್ದು ಸ್ವಲ್ಪ ಆಶ್ಚರ್ಯಕರವೇ. ನನ್ನ ಆಶ್ಚರ್ಯವನ್ನು ನಾನು ಮುಚ್ಚಿಟ್ಟುಕೊಳ್ಳದೆ ನಾರಾಯಣಮೂರ್ತಿಗಳನ್ನು ಕೇಳಿಯೇ ಬಿಟ್ಟೆ. ಅವರು ಹೇಳಿದರು :

"ರಾಮು, ಇದು ನಡೆದು ಬಹಳ ಕಾಲವಾಯಿತು. ನನಗೆ ಸರಿಯಾಗಿ ನೆನಪಿಲ್ಲ. ಅಂತೂ ಇಷ್ಟುಮಾತ್ರ ನಿಜ. ಮೊದಮೊದಲು ನಾನು ನನ್ನ ಹೆಂಡತಿಯನ್ನು ಕಸಕ್ಕಿಂತಲೂ ಕಡೆಯಾಗಿ ಕಾಣುತ್ತಿದ್ದೆ. ಅವಳ ಅದೃಷ್ಟವೊ, ನನಗೇ ಆ ರೀತಿ ಪ್ರೇರಣೆಯಾಯಿತೊ ಏನೋ, ನಾನೊಂದೂ ಅರಿಯೆ. ಅವಳು ಮೊದಲನೆಯ ಸಲ ಸಾಹಸನಾಗಿ

ನನ್ನ ಕಾಲ ಬಳಿ ಬಂದು ಮಲಗಿದ್ದಳಲ್ಲ, ಆಗ ಅವಳ ಮೇಲೆ ಮೊದಲು ಮರುಕ, ಆಮೇಲೆ ಪ್ರೀತಿ ಉಕ್ಕಿ ಬಂತು. ಅದಕ್ಕೆ ಹಿಂದೆಯೇ ನನ್ನ ಮನಸ್ಸಿನಲ್ಲಿ ಒಂದು ಬಗೆಯ ಹೋರಾಟ ನಡೆಯುತ್ತಿತ್ತು. ಬುದ್ಧಿ ಬೇಡ ಎನ್ನುತ್ತಿದ್ದರೂ ಹೃದಯ ಅವಳನ್ನು ಸ್ವೀಕರಿಸು ಎಂದು ಹೇಳುತ್ತಿತ್ತು. ಯಾವಾಗ ನಾನು ಅವಳನ್ನು ಸ್ವೀಕರಿಸಿಬಿಟ್ಟೆನೋ ಅಂದಿನಿಂದ ಅವಳು ನನಗೆ ಒಪ್ಪಾದಳು. ಅವಳ ಕಪ್ಪೂ ನನಗೆ ಒಪ್ಪಾಯಿತು.

“ನನಗೆ ತೋರುತ್ತೆ ರಾಮು, ಈ ಪ್ರೀತಿ ಎನ್ನುವುದು ಹೇಗೋ ಹುಟ್ಟಿಬಿಡುತ್ತೆ. ಇಂಗ್ಲೀಷು ಜನರಲ್ಲಿ ಮದುವೆಗೆ ಮುಂಚೆ ಒಬ್ಬರನ್ನು ಒಬ್ಬರು ಪ್ರೀತಿಸಿಬಿಡುತ್ತಾರಂತೆ. ಆಗ ಒಬ್ಬರಿಗೊಬ್ಬರಿಗೆ ಪರಿಚಯ ಕೂಡ ಇರುವುದಿಲ್ಲ. ಅವರಲ್ಲಿರುವ ಅವಗುಣಗಳು, ಲೋಪ ದೋಷಗಳು ಇವೆಲ್ಲ ಒಬ್ಬರಿಗೊಬ್ಬರಿಗೆ ಗೊತ್ತಾದಾಗ ಕೆಲವು ಸಂದರ್ಭಗಳಲ್ಲಿ ಪ್ರೀತಿ ಕಡಮೆಯಾಗುತ್ತ ಬಂದರೂ ಬರಬಹುದು. ಕೆಲವು ವೇಳೆ, ಹೆಂಡತಿ ಗಂಡನಿಗೆ ಬೇಡದೆಯೊ ಗಂಡ ಹೆಂಡತಿಗೆ ಬೇಡದೆಯೊ ದ್ವೇಷ ಕೂಡ ಹುಟ್ಟಿ, ಅವನು ಇವಳನ್ನೊ ಇವನು ಅವಳನ್ನೊ ಬಿಟ್ಟುಬಿಡುವುದೂ ಉಂಟು. ತೀರಾ ಕ್ಷುದ್ರಕಾರಣಗಳಿಗಾಗಿ ಗಂಡ ಹೆಂಡಿರು ಒಬ್ಬರನ್ನು ಒಬ್ಬರು ಬಿಟ್ಟಿರುವ ಸಂದರ್ಭಗಳೂ ಅನೇಕ ಇವೆಯಂತೆ. ನಮ್ಮಲ್ಲಿ ಹಾಗಲ್ಲ ನೋಡು. ಮದುವೆಯಾದ ಮೇಲೆ ಪರಿಚಯವಾಗುತ್ತೆ; ಕ್ರಮ ಕ್ರಮವಾಗಿ ಇಬ್ಬರ ಗುಣಾವಗುಣಗಳೂ ಪರಸ್ಪರ ಗೊತ್ತಾಗುತ್ತೆ; ಪರಿಚಯ ಪ್ರೇಮಕ್ಕೆ ತಿರುಗುತ್ತೆ. ಈ ಪ್ರೇಮವೇ ಆ ಬಗೆಯ ಪ್ರೇಮ ಕ್ಕಿಂತ ಸ್ಥಿರವೆಂದು ನನಗೆ ತೋರುತ್ತದೆ. ಮತ್ತೆ, ನನ್ನ ವಿಷಯವನ್ನೇ ತೆಗೆದುಕೊ: ಅವಳ ವಿಷಯದಲ್ಲಿ ನನಗೆ ದಿನ ದಿನಕ್ಕೂ ಪ್ರೇಮ ಹೆಚ್ಚಾಗುತ್ತಿದೆಯೇ ಹೊರತು ಕಡಮೆಯಾಗುತ್ತಿಲ್ಲ. ಅವಳೇ ಒಂದು ಸಲ, ಬೇಕಾದರೆ ಒಬ್ಬಳು ಚೆನ್ನಾಗಿರುವವಳನ್ನು ಮದುವೆಯಾಗುವಂತೆ ನನಗೆ ಹೇಳಿದಳು. ಅವಳಿಗೆ ಬೇಕಾದ್ದು ನನ್ನ ಪಾದಸೇವೆ ಮಾತ್ರವಂತೆ. ಹೀಗೆ ಹೇಳುವುದಕ್ಕೆ ಬಹಳ ಔದಾರ್ಯ ಬೇಕು, ರಾಮು. ನಿಜವಾದ ಪ್ರೇಮದಲ್ಲಿ ಈ ಔದಾರ್ಯ ಗುಣವಿದೆ. ಆದರೆ ಅಂತಹ ಔದಾರ್ಯವನ್ನು ನಾವು ದುರುಪಯೋಗಪಡಿಸಿಕೊಳ್ಳುವುದು ಸರಿಯಲ್ಲ. ನಾನು ಖಂಡಿತ

ಮದುವೆಯಾಗುವುದಿಲ್ಲ, ನೀನೆ ನನ್ನ ರಾಣಿ, ರತಿ ಎಂದೆ. ಅವಳು ನಕ್ಕಳು. ನಾನು ಹೇಳಿದ್ದು ಹಾಸ್ಯ ಎಂದು ತೋರಿತೋ ಏನೋ ಅವಳಿಗೆ ಆಗ. ಆದರೆ ಹಾಸ್ಯಕ್ಕೆ ಹೇಳಲಿಲ್ಲವೆಂದು ಅವಳಿಗೆ ಗೊತ್ತಾಗಿದೆ ಈಗ.

"ಚೆನ್ನು ಚಾರು ಎನ್ನುವುದು ನಮ್ಮ ಮನೋಭಾವನೆ, ರಾಮು. ನನಗೆ ಅನುಭವದಿಂದ ಅದು ಗೊತ್ತಾಗಿದೆ. ನಿನಗೆ ಅರ್ಥವಾಗುವುದಿಲ್ಲ. ನಮ್ಮ ಮನಸ್ಸಿಗೆ ಒಮ್ಮೆ ಚೆನ್ನು ಎಂದು ತೋರಿಬಿಟ್ಟರೆ ಅದು ಇತರರಿಗೆ ಚೆನ್ನಾಗಿಲ್ಲದಿದ್ದರೂ ನಮಗೆ ಚೆನ್ನಾಗಿಬಿಡುತ್ತದೆ.

"ಪ್ರೀತಿಗೆ ಸಾಮಾನ್ಯವಾಗಿ ಹೊರಗಿನ ರೂಪು ಕಾರಣವಾಗಿರುತ್ತದೆ. ಆದರೆ ಹೊರಗಿನ ರೂಪಷ್ಟೇ ಪ್ರೀತಿಗೆ ಆಧಾರವಾಗಿಬಿಟ್ಟರೆ ಆ ಪ್ರೀತಿ ಚಿರಸ್ಥಾಯಿಯಾಗಿರುವುದಿಲ್ಲ. ನೀನು ಹೆಂಡತಿಯನ್ನು ಮನಃಪೂರ್ವಕ ವಾಗಿ ಪ್ರೀತಿಸುತ್ತಿ ಎಂದು ಇಟ್ಟುಕೊ; ಒಂದು ವೇಳೆ ಅವಳು ಕಾರಣಾಂತರದಿಂದ—ಸಿಡುಬಾಗಿ ಸಿಡುಬಿನ ಕಲೆ ಉಳಿದು ಎಂದು ಇಟ್ಟುಕೊ—ವಿಕಾರಗೊಂಡರೆ ನಿನ್ನ ಪ್ರೀತಿ ಇಂಗಿಹೋಗುತ್ತದೆಯೊ? ಇಲ್ಲ. ಹಾಗೆ ಇಂಗಿ ಹೋದರೆ, ಅದು ಪ್ರೀತಿಯಲ್ಲವೇ ಅಲ್ಲ; ಪ್ರೀತಿಯ ಸೋಗು ಹಾಕಿಕೊಂಡಿದ್ದ ಮೋಹ, ಕಾಮ.

"ನನ್ನ ಹೆಂಡತಿ ತನ್ನ ರೂಪಿನಿಂದ ನನ್ನ ಪ್ರೀತಿ ಸಂಪಾದಿಸಲಿಲ್ಲ: ತನ್ನ ನಿರ್ವ್ಯಾಜ ಪ್ರೀತಿಯಿಂದ ನನ್ನ ನಿರ್ವ್ಯಾಜ ಪ್ರೀತಿ ಗಳಿಸಿದಳು.

"ಹೋಗಲಿ, ಆ ವಿಷಯ ಇಷ್ಟಕ್ಕೆ ಸಾಕು. ಹೇಳುತ್ತ ಹೋದರೆ ಕೊನೆ ಮೊದಲೇ ಇಲ್ಲ. ಪ್ರೀತಿಯ ವಿಷಯ ಅನುಭವಿಸಿ ತಿಳಿಯಬೇಕೇ ಹೊರತು ಇನ್ನೊಬ್ಬರಿಂದ ಕೇಳಿ ತಿಳಿಯಲು ಸಾಧ್ಯವಿಲ್ಲ. ಅಲ್ಲದೆ, ನೀನು ವಿದ್ಯಾವಂತ. ಗ್ರಂಥಗಳಲ್ಲಿ ಈ ಪ್ರೀತಿಯ ವಿಷಯವನ್ನು ಬೇಕಾದಷ್ಟು ಓದಿದವನು. ನಿನಗೆ ನಾನು ಹೇಳಿಕೊಡಬೇಕೆ!

"ಏತಕ್ಕೆ ಹೇಳುವುದಕ್ಕೆ ಬಂದೆ ಎಂದರೆ"—ಎಂದು ನಾನು ಕರೆದು ಕೊಂಡು ಹೋಗಿದ್ದ ವರನನ್ನು ಸಂಬೋಧಿಸಿ ಮುಂದುವರಿಸಿದರು: "ನೋಡಯ್ಯ, ನನ್ನ ಮಗಳು ರತಿ ಎಂದು ನಾನು ಹೇಳುವುದಿಲ್ಲ. ತಕ್ಕಮಟ್ಟಿಗಿದ್ದಾಳೆ. ಮನೆಗೆಲಸವನ್ನೆಲ್ಲಾ ಕಲಿಸಿದ್ದೇವೆ. ಗೃಹಿಣಿ ಯಾಗಲು ತಕ್ಕವಳನ್ನಾಗಿ ಮಾಡಿದ್ದೇವೆ. ಈಗಿನ ಕಾಲದ ಥಳುಕು

ಪಳುಕು ಬರದು. ಅಂಥ ವಿದ್ಯಾವಂತೆಯೇನೂ ಅಲ್ಲ. ಆದರೆ, ವ್ಯವಹಾರಜ್ಞಾನಕ್ಕೆ ತಕ್ಕಷ್ಟು ವಿದ್ಯೆ ಹೇಳಿಸಿದ್ದೇನೆ. ನನ್ನ ಮನೆಯಲ್ಲೆ ನೀನು ಓದಿಕೊಂಡಿರಬಹುದು. ಬಿ.ಎ. ಪ್ಯಾಸಾದ ಮೇಲೆ ಎಲ್ಲಾದರೂ ಕೆಲಸಕ್ಕೆ ಸೇರಿಸುತ್ತೇನೆ. ಜೀವನದಲ್ಲಿ ನಿನ್ನನ್ನು ಒಂದು ನೆಲೆ ಸೇರುವಂತೆ ಮಾಡಲು ಸರ್ವಪ್ರಯತ್ನ ಮಾಡುತ್ತೇನೆ. ನನ್ನ ಹೆಂಡತಿ ಕಡೆಯಿಂದ ನನಗೆ ಸ್ವಲ್ಪಮಟ್ಟಿನ ದುಡ್ಡುಕಾಸು ಬಂತು ; ಅದಕ್ಕೆ ಅವಳು ನನ್ನ ಭಾಗದ ಭಾಗ್ಯಲಕ್ಷ್ಮಿಯಾಗಿ ಬಂದಳು ಎಂದು ನನ್ನ ತಾಯಿ ಪದೇಪದೇ ಹೇಳುತ್ತಿದ್ದರು. ಮೊದಮೊದಲು ನಾನೂ ಹಾಗೆಯೇ ತಿಳಿದುಕೊಂಡಿದ್ದೆ. ಆದರೆ ಆ ಭಾಗ್ಯ ಶಾಶ್ವತವಲ್ಲ ; ಶಾಶ್ವತವಲ್ಲದ ಭಾಗ್ಯವನ್ನು ಸದ್ವಿನಿಯೋಗ ಮಾಡುವುದು ಮಾತ್ರ ನಮ್ಮ ಕರ್ತವ್ಯ. ನಿಜವಾದ ಪ್ರೇಮವೆಂದರೆ ಏನು ಎನ್ನುವುದು ಅವಳಿಂದ ನನಗೆ ತಿಳಿಯಿತು. ಅವಳು ನನಗೆ ತಂದ ಭಾಗ್ಯವೆಂದರೆ ಆ ಪ್ರೇಮಭಾಗ್ಯ. ಆದ್ದರಿಂದ ಅವಳು ನನ್ನ ಭಾಗ್ಯಲಕ್ಷ್ಮಿ; ನನ್ನ ಹೆಂಡತಿಯ ಹೆಸರು ಭಾಗ್ಯಲಕ್ಷ್ಮಿಯಲ್ಲ. ನನ್ನ ಮಗಳಿಗೆ ಆ ಹೆಸರು ಇಟ್ಟಿದ್ದೇನೆ. ಅವಳು ನಿಜವಾಗಿಯೂ ನಿನ್ನ ಭಾಗ್ಯಲಕ್ಷ್ಮಿಯಾಗಲಿ, ನೀನು ಒಪ್ಪುವುದಾದರೆ. ಇದೇ ನನ್ನ ಆಶೀರ್ವಾದ."

ವರ ನಾರಾಯಣಮೂರ್ತಿಗಳ ಮಗಳನ್ನು ನೋಡಿ, ಮದುವೆಗೆ ಒಪ್ಪಿಕೊಂಡ. ನನಗೆ ತುಂಬ ಸಂತೋಷವಾಯಿತು.

ಭಾಗ್ಯಲಕ್ಷ್ಮಿಯ ಮದುವೆಗೂ ಹೋಗಿದ್ದೆ – ಗಂಡಿನ ಕಡೆಯವನಾಗಿ ಹೋಗಿ ಹೆಣ್ಣಿನವರ ಮನೆಯಲ್ಲಿ ಓಡಾಡುತ್ತಿದ್ದೆ. ಮದುವೆಗೆ ಶೇಷು, ಅವನ ಹೆಂಡತಿ ಮಕ್ಕಳು ಬಂದಿದ್ದರು. ಮದುವೆಯಲ್ಲಿ ಸುಬ್ಬಯ್ಯನವರ ಓಡಾಟವೇ ಓಡಾಟ. ಹಿಂದೆ ಸೂತ್ರಧಾರಿಗಳಾಗಿ ಕೆಲಸ ನಡಸುತ್ತಿದ್ದವರು ಗೌರಮ್ಮನವರು. ಮದುವೆ ವಿಜೃಂಭಣೆಯಿಂದ ನಡೆಯಿತು.

* * *

ನಾರಾಯಣಮೂರ್ತಿಗಳ ಭಾಗ್ಯಲಕ್ಷ್ಮಿ ಬಡವರ ಮನೆ ಸೇರಿದಳು.

೪೨೧–೧೦೦೦—ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು ನಗರ — ೧೯೪೨